KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಮೇ ೪, ೨೦೦೬ (ವೈಶಾಖ ೧೪, ಶಕ ವರ್ಷ ೧೯೨೮) | ಸಂಚಿಕೆ ೧೮ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್.ಟಿ.ಎಫ್. ಪೇದೆ, ಶ್ರೀ ನಾಗೇಶ, ಸಿಪಿಸಿ-368, ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:**

1 ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಾಮರಾಜನಗರ ಜಿಲ್ಲೆ, ಇವರ ಆದೇಶ ಸಂಖ್ಯೆ: ಜಾನ/ಡಿಇ/ಶಿಕ್ಷೆ-02/2003-04, ದಿನಾಂಕ:18-05-2004.

2 ನ್ಯಾಷನಲ್ ಹ್ಯೂಮನ್ ರೈಟ್ಸ್ ಕಮೀಷನ್ ನವದೆಹಲಿ ಇವರ ನೋಟೀಸ್ ಸಂಖ್ಯೆ:506/10/2002-03, WC/UC, ದಿನಾಂಕ:13-02-2003.

3 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಜಿಸಿ/43/ NHRC/2004. ದಿನಾಂಕ:29-11-2004.

4 ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 163/ಸಿಎಸ್‌ಎಸ್/2005, ದಿನಾಂಕ: 30-01-2006.

**ಪ್ರಸ್ತಾವನೆ:**

ಶ್ರೀ ನಾಗೇಶ, ಸಿಪಿಸಿ-368 ಎಸ್‌ಟಿಎಫ್ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಶ್ರೀ ನಾಗೇಶ್, ಸಿಪಿಸಿ-368 ಹಾಲಿ ಹನೂರು ಠಾಣೆ, (ಈ ಹಿಂದೆ ಕೊಳ್ಳೆಗಾಲ ಗ್ರಾಮಾಂತರ ಠಾಣೆ) ಆದ ಇವರು ಈ ಹಿಂದೆ ವೀರಪ್ಪನ್ ವಿರುದ್ಧದ ವಿಶೇಷ ಕಾರ್ಯಾಚರಣೆ ಪಡೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರನ್ನು ವಿಶೇಷ ಕಾರ್ಯಾಚರಣೆ ಪಡೆ ಕರ್ತವ್ಯದ ಮೇಲೆ ಆಲಂಬಾಡಿ ಗ್ರಾಮಕ್ಕೆ ನೇಮಕ ಮಾಡಿದ್ದಾಗ, ಅಲ್ಲಿನ ನಿವಾಸಿಯಾದ ಶ್ರೀ ಚಿಕ್ಕಮಲ್ಲ ಎಂಬುವವರ ಮನೆಯ ಬಳಿ ರಾತ್ರಿ ವೇಳೆಯಲ್ಲಿ ಹೋಗಿ, ಮಲಗಿದ್ದವರನ್ನು ಎಬ್ಬಿಸಿ, ಅವರನ್ನು ಸಾರಾಯಿ ತರಲು ಹೇಳಿ, ಅವರು ನಿರಾಕರಿಸಿದಾಗ ಶ್ರೀ ಚಿಕ್ಕಮಲ್ಲ ಮತ್ತು ಅವರ ಹೆಂಡತಿಗೆ ಅವಾಚ್ಯ ಶಬ್ದಗಳಿಂದ ಬಯ್ದು ಅವರನ್ನು ಅವರ ಮಗಳು ಲಕ್ಷ್ಮಿ ಎಲ್ಲಿ ಎಂದು ವಿಚಾರಿಸಿ, ಆಕೆ ಮಲಗಿದ್ದ ಆಕೆಯ ಚಿಕ್ಕಪ್ಪನಾದ ಕೋ ಮಾದಯ್ಯ ಎಂಬುವವರ ಮನೆಯ ಬಳಿಗೆ ನಿಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗಿದ್ದ ಶ್ರೀ ಗೋವಿಂದ ರಾಜು ಎಂಬಾತನನ್ನು ಕರೆಯಲು ಕಳುಹಿಸಿ, ಆಕೆ ಬರಲು ನಿರಾಕರಿಸಿದಾಗ ವಾಪಾಸ್ಸು ಹೋಗಿದ್ದು, ಆನಂತರ ನಡೆದ ಕೋಮಾದಯ್ಯ ಎಂಬುವವನ ಮಗನ ಮದುವೆ ಸಂದರ್ಭದಲ್ಲಿ ಕುಡಿದು ಗಲಾಟೆ ಮಾಡುತ್ತಿದ್ದ ಕೋಮಾದಯ್ಯನ ಮಗ ಪಳನಿ ಮತ್ತು ಚಿಕ್ಕಮಲ್ಲರವರ ಮಗ ಆರೋಗ್ಯಸ್ವಾಮಿ (ಶ್ರೀಮತಿ ಲಕ್ಷ್ಮಿಯ ಸಹೋದರ) ರವರನ್ನು ಹೊಡೆದು ನೀವು ವಾಸವಿದ್ದ ಆಲಂಬಾಡಿ ಗ್ರಾಮದ ಫಾರೆಸ್ಟ್

ಕ್ವಾಟ್ರಸ್ಗೆ ಕರೆದುಕೊಂಡು ಹೋಗಿ ಅಕ್ರಮವಾಗಿ ಬಂದಿಸಿಟ್ಟಿದ್ದು, ಅವರನ್ನು ಬಿಡುವಂತೆ ಕೇಳಿಕೊಂಡು ಅಲ್ಲಿಗೆ ಬಂದ ಶ್ರೀಮತಿ ಲಕ್ಷ್ಮಿ ಮತ್ತು ಇತರೆ ಹೆಂಗಸರ ಪೈಕಿ, ಶ್ರೀಮತಿ ಲಕ್ಷ್ಮಿಯು ತನ್ನ ಅಣ್ಣಂದಿರನ್ನು ಬಿಡುಗಡೆ ಮಾಡುವಂತೆ ಕೇಳಿಕೊಂಡಾಗ, ನೀವು ಶ್ರೀಮತಿ ಲಕ್ಷ್ಮಿಯನ್ನು ಕುರಿತು ಇತರೆ ಹೆಂಗಸರ ಎದುರಿನಲ್ಲಿ ``ಅವತ್ತು ಮನೆಯ ಬಳಿ ಬಂದಾಗ ನೀ ಬರಲಿಲ್ಲ ಈವತ್ತು ಬಂದು ನಿಮ್ಮಣ್ಣನನ್ನು ಬಿಡು ಅಂತ ಕೇಳ್ತಿಯಾ, ಈವತ್ತು 100-00 ರೂ. ಕೊಟ್ಟು ಬೆಳಗಾಗುವುದರಲ್ಲಿ ನಿನ್ನ ಕೈಯಲ್ಲಿ ಎರಡು ಮಕ್ಕಳನ್ನು ಕೊಡುತ್ತೇನೆ ಬಾ'' ಎಂದು ಎಲ್ಲರ ಎದುರಿನಲ್ಲಿ ಶ್ರೀಮತಿ ಲಕ್ಷ್ಮಿಯನ್ನು ಲೈಂಗಿಕ ಕ್ರಿಯೆಗೆ ಆಹ್ವಾನಿಸಿ, ಇವರ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು, ದೌರ್ಜನ್ಯದಿಂದ ವರ್ತಿಸಿ, ಇಲಾಖೆಯ ಘನತೆಗೆ ಕೆಟ್ಟ ಹೆಸರು ಬರುವ ರೀತಿಯಲ್ಲಿ ವರ್ತಿಸಿ, ತಮ್ಮ ಕರ್ತವ್ಯದಲ್ಲಿ ಅತಿ ಹೆಚ್ಚಿನ ದುರ್ನಡತೆ ಮತ್ತು ಲೋಪ ಎಸಗಿದ್ದು.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಾಮರಾಜನಗರ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:18-05-2004ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗುವಂತೆ ಒಂದು ವರ್ಷದ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ರಾಷ್ಟ್ರೀಯ ಮಾನವ ಹಕ್ಕು ಆಯೋಗವು ದಿನಾಂಕ:13-02-2003ರ ತನ್ನ ನೋಟೀಸಿನಲ್ಲಿ ಆರೋಪಿಯ ವಿರುದ್ಧ ಶಿಸ್ತಿನ ಕ್ರಮ ಕೈಗೊಂಡು ವರದಿ ಸಲ್ಲಿಸಲು ಕೋರಿದೆ. ರಾಷ್ಟ್ರೀಯ ಮಾನವ ಹಕ್ಕು ಆಯೋಗದ ಶಿಫಾರಸ್ಸಿನ ಮೇರೆಗೆ ಹಾಗೂ ಸದರಿ ಪೇದೆಯ ಅಪರಾಧವು ತುಂಬಾ ಕಾನೂನು ಬಾಹಿರವಾಗಿದ್ದು, ಕಠಿಣ ಶಿಕ್ಷೆ ವಿಧಿಸಲು ನಿರ್ಧರಿಸಿ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನೆಯನ್ನು ಮಾರ್ಪಡಿಸಿ, ತೀವ್ರತರದ ಆರೋಪಕ್ಕೆ ತೀವ್ರವಾದ ದಂಡನೆ ವಿಧಿಸಲು ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:30-01-2006ರ ತನ್ನ ಪತ್ರದಲ್ಲಿ ಸರ್ಕಾರ ಉದ್ದೇಶಿಸಿದ ಮಾರ್ಪಾಡಿಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 217 ಪೊಸೆಅ 2004 ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶಿಸ್ತು ಪ್ರಾಧಿಕಾರಿಯ ದಿನಾಂಕ:18-05-2004ರ ಆದೇಶವನ್ನು ರದ್ದುಪಡಿಸಿ, ಶ್ರೀ ನಾಗೇಶ್ ಎಸ್‌ಟಿಎಫ್, ಪೇದೆ-368 ಇವರು ಎಸಗಿರುವ ಹೀನ ಕೃತ್ಯಕ್ಕೆ ಕೆಳಕಂಡ ದಂಡನೆಯನ್ನು ಸರ್ಕಾರವು ವಿಧಿಸಿದೆ.

1) ಶ್ರೀ ನಾಗೇಶ್ ಸಿಪಿಸಿ-368 ಇವರ ವೇತನವನ್ನು ಪಿಸಿ ಹುದ್ದೆಯ ಕನಿಷ್ಟ ಮಟ್ಟಕ್ಕೆ ಐದು ವರ್ಷಗಳ ವರೆಗೆ ಇಳಿಸಿ, ಈ ಐದು ವರ್ಷಗಳಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ನೀಡದೆ, ಐದು ವರ್ಷಗಳ ನಂತರ ಪಿಸಿ ಹುದ್ದೆಯ ವೇತನ ಶ್ರೇಣಿಯ ಕನಿಷ್ಟ ಮಟ್ಟದಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿಗಳಿಸತಕ್ಕದ್ದು.

2) ಈ ಆದೇಶವು ಶಿಸ್ತು ಪ್ರಾಧಿಕಾರಿ ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:30-01-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 367

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಡಿ.ವಿ.ಕಾಂಬಳೆ, ಪಿ.ಐ. ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ ಬಿಜಾಪೂರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1 ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಿಜಾಪೂರ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ-3/ಪಿಆರ್-57/2000-01, ದಿನಾಂಕ:20-07-2001.

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ:ಅಪೀಲು/77/ಉವ/2001, ದಿನಾಂಕ:25-02-2002.

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:27-01-2005.

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಸಿಬಿ/8/5/2005-06, ದಿನಾಂಕ:15-07-2005.

5 ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/147/CNS 05, ದಿನಾಂಕ:16.01.2006.

**ಪ್ರಸ್ತಾವನೆ:**

ಶ್ರೀ ಡಿ.ವಿ.ಕಾಂಬಳೆ, ಪಿಐ `ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ` ಬಿಜಾಪೂರ ಜಿಲ್ಲೆ, (ಈ ಹಿಂದೆ ಇಂಡಿ ವೃತ್ತ) ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರ ನಿಯಮ 7 ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

"ನಿಮಗೆ ಶ್ರೀ ಅಜಿತ್ ಹೀರಾಲಾಲದೋಷಿ, ಸಾ:ಇಂಡಿ ರವರ ಡಿಬಿಬಿಎಲ್ ಆಯುದ್ಧ ಲೈಸೆನ್ಸ್ ಅರ್ಜಿ ವಿಚಾರಣೆ ಕುರಿತು ಸೆಪ್ಟೆಂಬರ್-2000ರಂದು ಬಂದಿದ್ದು, ನೀವು ಈ ಬಗ್ಗೆ ಅರ್ಜಿದಾರರಿಂದ ಫೋಟೋ, ಉತಾರೆ, ಇನ್ನಿತರ ಕಾಗದ ಪತ್ರಗಳನ್ನು ಪಡೆದುಕೊಂಡಿದ್ದು, ಆದರೆ ಅವರ ಹೇಳಿಕೆಯನ್ನು ಪಡೆಯದೆ, ವಿನಾಕಾರಣ ಮಾರ್ಚ್ 2001ರ ವರೆಗೆ ಅದರ ಅರ್ಜಿಯನ್ನು ಇಟ್ಟುಕೊಂಡು, ದುರುದ್ದೇಶದಿಂದ ನಾಮಂಜೂರ ಮಾಡಿ ಕಳಿಸಿರುತ್ತೀರಿ. ಈ ಮೂಲಕ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ, ಕರ್ತವ್ಯ ಚ್ಯುತಿ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಿಜಾಪೂರ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:20.07.2001ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮೂರು ತಿಂಗಳವರೆಗೆ ಭವಿಷ್ಯದ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ, ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:25-02-2002ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಲೈಸನ್ಸ್ ಅರ್ಜಿಯ ಬಗ್ಗೆ ಅರ್ಜಿದಾರರಿಗೆ ನೋಟೀಸುಗಳನ್ನು ಜಾರಿ ಮಾಡಿ ವಿವರಗಳನ್ನು ನೀಡುವಂತೆ ಸೂಚಿಸಿರುತ್ತಾರೆ. ಹಾಗೂ ಅವರ ಸಿಬ್ಬಂದಿಯ ಮುಖಾಂತರ ಅನೇಕ ಬಾರಿ ಕರೆ ಕಳುಹಿಸಿರುತ್ತಾರೆ. ಒಂದು ಅರ್ಜಿಯ ವಿಲೇವಾರಿ ಸಲುವಾಗಿ ವಿಧಿಸಿರುವ ಶಿಕ್ಷೆ ಅತೀ ಹೆಚ್ಚಿನದೆಂದು ಕಂಡು ಬಂದಿದ್ದು, ಶಿಸ್ತು ಪ್ರಾಧಿಕಾರಿ ಆದೇಶವನ್ನು ರದ್ದುಪಡಿಸಿ, `ಎಚ್ಚರಿಕೆ` ನೀಡಲು ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಆಯೋಗವು ದಿನಾಂಕ:16-01-2006ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶವನ್ನು ರದ್ದುಪಡಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 150 ಪೊಸಿಅ 2005, ಬೆಂಗಳೂರು , ದಿನಾಂಕ: 25ನೇ ಫೆಬ್ರವರಿ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶಿಸ್ತು ಪ್ರಾಧಿಕಾರಿಯ ದಿನಾಂಕ:20-07-2001ರ ಆದೇಶವನ್ನು ರದ್ದುಪಡಿಸಿ, ಚಲಾಯಿಸಿ, ಶ್ರೀ ಡಿ.ವಿ.ಕಾಂಬಳೆ, ಪಿಐ, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬಿಜಾಪೂರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:27-01-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಅವರ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆಗೊಳಿಸಿ, ಸಕ್ರಮಗೊಳಿಸಲು ಆದೇಶಿಸಿದೆ. ಇನ್ನು ಮುಂದೆ ಯಾವುದೇ ರೀತಿಯ ವಿಳಂಬಕ್ಕೆ ಎಡೆಮಾಡಿಕೊಡದೆ, ಅರ್ಜಿಗಳ ವಿಲೇವಾರಿ ಮಾಡುವಂತೆ `ಎಚ್ಚರಿಕೆ` ನೀಡಿದೆ. ಈ ಆದೇಶವು ಶಿಸ್ತು ಪ್ರಾಧಿಕಾರಿ ಹೊರಡಿಸಿದ ದಂಡನಾ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:16-01-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 368

**ವಿಷಯ:** ಶ್ರೀ ಎಂ.ಪಿ.ಸಂದೇರ, ಮಾಜಿ ಸಿಪಿಸಿ-754, ಬೆಳಗಾಂ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1 ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಮತ್ತು ಇವರ ಆದೇಶ ಸಂಖ್ಯೆ: ಯುಎನ್/59/1996, ದಿನಾಂಕ:16-08-1997.
2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಉಪ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು/ಉವ/35/99 ದಿನಾಂಕ:16-12-1998
3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:05-01-99.
4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/6/1/99-2000 ದಿನಾಂಕ:18-06-1999.
5 ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 159/ಸಿಎಸ್‌ಎಸ್/2005, ದಿನಾಂಕ:30-01-2006.

**ಪ್ರಸ್ತಾವನೆ:**

ಶ್ರೀ ಎಂ.ಡಿ.ಸಂದೇರ, ಮಾಜಿ ಸಿಪಿಸಿ-754 ಬೆಳಗಾಂ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಆಪಾದಿತ ಪೊಲೀಸ್ ಅಧಿಕಾರಿ ಸಿಪಿಸಿ ಬನಂ.754 ಎಂ.ಪಿ.ಸಂದೇರ, ಮೂಡಲಗಿ ಪಿಎಸ್ ನೀವು ಮೂಡಲಗಿ ಪೊಲೀಸ್ ಠಾಣೆಯ ಪಿಎಸ್‌ಐ ಶ್ರೀ ಪಿ.ಬಿ.ನಾಯ್ಡು ರವರ ಗೈರು ಹಾಜರಾತಿ ಅವಧಿಯಲ್ಲಿ ನೀವು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಗೋಕಾಕ ಬ್ರಾಂಚರವರಿಗೆ ಪತ್ರ ಬರೆದು ಅದರ ಮೇಲೆ ಪಿಎಸ್‌ಐ ಎಂದು ಖೊಟ್ಟಿ ಸಹಿ ಮಾಟಿ ಹಣ ತಮಗೆ ನೀಡುವಂತೆ ಮನವಿ ಮಾಡಿಕೊಂಡಿದ್ದು, ಪಡೆದುಕೊಂಡ ಆ ಹಣವನ್ನು ಸಿಬ್ಬಂದಿ ಜನರಿಗೆ ಬಟವಾಡೆ ಮಾಡುವ ಕುರಿತು ಜಿಲ್ಲಾ ಪೊಲೀಸ್ ಕಾರ್ಯಾಲಯದಿಂದ ಬಂದಂತಹ ಮಾಹೆ ಆಗಸ್ಟ್ 1995 ನೇದ್ದರ ಪ್ರಯಾಣ ಭತ್ಯೆಯ ಬಿಲ್ಲಿನ ಡಿಡಿ ನಂಬರ.762308, ದಿನಾಂಕ:13-08-96 ರೂ.8148-00 ಹಾಗೂ ಮಾಹೆ 1996ರ ಸಿಬ್ಬಂದಿ ಜನರ ವಾರದ ರಜೆಯ ಭತ್ಯೆಯ ಬಿಲ್ಲಿನ ಡಿಡಿ ನಂಬರ.762112, ದಿನಾಂಕ:07.08.96 ರೂ.3060-00 ನೇದ್ದವುಗಳ ಮೇಲೆ ಸಹಾ ಪಿಎಸ್‌ಐ ಎಂದು ಖೊಟ್ಟಿ ಸಹಿ ಮಾಡಿ ಒಟ್ಟು ರೂ.11208-00 ಹಣವನ್ನು ದಿನಾಂಕ:19-08-69ರಂದು ಬ್ಯಾಂಕಿನಿಂದಾ ಡ್ರಾ ಮಾಡಿಕೊಂಡು ಸದರಿ ಸರಕಾರಿ ಹಣವನ್ನು ಬಟವಾಡೆ ಮಾಡದೆ ನಿಮ್ಮ ಸ್ವಂತ ಉಪಯೋಗಕ್ಕಾಗಿ ದುರುಪಯೋಗಪಡಿಸಿಕೊಂಡು ಅದೇ ದಿನದಿಂದಾ ಕರ್ತವ್ಯಕ್ಕೆ ಗೈರು ಹಾಜರಿ ಉಳಿದು ನೀವು ನಿಮ್ಮ ಕರ್ತವ್ಯದಲ್ಲಿ ದುರ್ನಡತೆ ಮತ್ತು ವಿಮುಖತೆ ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾಂ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:16-08-1997ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಉಪ ವಲಯ, ಬೆಳಗಾವಿ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:16-12-1998ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧ ಪೋರ್ಜರಿ ಕೇಸ್ ಅನ್ನು JMFC ಗೋಕಾಕ್ ನ್ಯಾಯಾಲಯದಲ್ಲಿ ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ವಾದ, ವಿವಾದಗಳನ್ನು, ಅಭಿಯೋಗ ಸಾಕ್ಷಿಗಳನ್ನು ವಿಚಾರಣೆ ಮಾಡಿದ ನಂತರ, ಅರ್ಜಿದಾರರು ಪೋರ್ಜರಿ ಸಹಿ ಮಾಡಿರುವುದಕ್ಕೆ ಆಧಾರವಿಲ್ಲವೆಂದೂ, ಹಣವನ್ನು ಪಿ.ಎಸ್.ಐ. ರವರಿಗೆ ನೀಡಿದಾಗ, ಅವರು ಬೇಡ, ನಿನ್ನ ಬಳಿಯೇ ಇರಲಿ ಎಂದಿರುವ ಕಾರಣ, ಅರ್ಜಿದಾರರು ಹಣವನ್ನು ತಮ್ಮ ಬಳಿ ಇಟ್ಟುಕೊಂಡಿದ್ದು, ಹಣವನ್ನು ಮನೆಗೆ ತೆಗೆದುಕೊಂಡು ಹೋಗಿದ್ದರೂ, ಅವರ ಅನಾರೋಗ್ಯದ ನಿಮಿತ್ತ ಸರ್ಕಾರಕ್ಕೆ ಹಿಂದಿರುಗಿಸಿಲ್ಲವೆಂದು, ಈ ಹಿಂದೆ ಎಷ್ಟು ಬಾರಿ ಹಣವನ್ನು ಬಟವಾಡೆ ಮಾಡಿದ್ದರೂ, ಈ ರೀತಿ ಆಗಿಲ್ಲವಾದ ಕಾರಣ, ಬೆನಿಫಿಟ್ ಆಫ್ ಡೌಟ್ ಮೇಲೆ ಅರ್ಜಿದಾರರನ್ನು ಖುಲಾಸೇ ಮಾಡದೆ. ಅರ್ಜಿದಾರರು ದಿನಾಂಕ:01-04-1989ರಂದು ಸರ್ಕಾರಿ ಸೇವೆಗೆ

ಸೇರಿದ್ದು, ಇವರ ವಿರುದ್ಧ ಯಾವುದೇ ಗುರುತರ ಆರೋಪ ಎಸಗಿರುವುದಿಲ್ಲ. ಅರ್ಜಿದಾರರು ಹಣವನ್ನು ಪಡೆದಿದ್ದರೂ, 10 ದಿನಗಳಲ್ಲಿ ಅದನ್ನು ಹಿಂದಿರುಗಿಸಿರುವ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆಯನ್ನು ರದ್ದುಪಡಿಸಿ, ಅರ್ಜಿದಾರರಿಗೆ ಸೇವೆಯಲ್ಲಿ ಮುಂದುವರೆಸುವ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:30-01-2006ರ ತನ್ನ ಪತ್ರದಲ್ಲಿ ಸರ್ಕಾರ ಉದ್ದೇಶಿಸಿದ ಮಾರ್ಪಾಡಿಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 270 ಪೊಸಿಅ 2005, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶಿಸ್ತು ಪ್ರಾಧಿಕಾರಿಯ ದಿನಾಂಕ:16-08-1997 ರ ದಂಡನಾದೇಶವನ್ನು ರದ್ದುಪಡಿಸಿ, ಶ್ರೀ ಎಂ.ಪಿ.ಸಂದೇರ, ಮಾಜಿ ಸಿಪಿಸಿ-754, ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:05-01-1999ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

1) ಅರ್ಜಿದಾರರನ್ನು ಸೇವೆಯಲ್ಲಿ ಪುನರ್ ನೇಮಕ ಮಾಡುವುದು;
2) ಇನ್ನು ಮುಂದೆ ಈ ರೀತಿ ಆಗದಂತೆ `ಎಚ್ಚರಿಕೆ` ನೀಡುವುದು;
3) ಅರ್ಜಿದಾರರ ವೇತನವನ್ನು ಎರಡು ವರ್ಷಗಳ ಅವಧಿಗೆ ಪಿಸಿ ಹುದ್ದೆಯ ವೇತನ ಶ್ರೇಣಿಯ ಕನಿಷ್ಟ ಮಟ್ಟಕ್ಕೆ, ಇಳಿಸಿ, ಈ ಅವಧಿಯಲ್ಲಿ ವಾರ್ಷಿಕ ವೇತನ ಬಡ್ತಿಗಳಿಸದೇ, ಎರಡು ವರ್ಷಗಳ ನಂತರ ದಂಡನೆ ವಿಧಿಸಿದ ಹಿಂದಿನ ದಿನದಂದು ಪಡೆಯುತ್ತಿದ್ದ ವೇತನಕ್ಕೆ ನಿಗದಿ ಪಡಿಸಿ, ವಾರ್ಷಿಕ ವೇತನ ಬಡ್ತಿ ಗಳಿಸತಕ್ಕದ್ದು;
4) ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವುದು;
5) ಈ ದಂಡನೆಯು ಶಿಸ್ತು ಪ್ರಾಧಿಕಾರಿ ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುವುದು;
6) ದಂಡನಾದೇಶದಿಂದ ಅರ್ಜಿದಾರರು ಪುನರ್ ನೇಮಕಗೊಂಡು, ಸೇವೆಗೆ ಹಾಜರಾಗುವ ವರೆಗಿನ ಅವಧಿಯನ್ನು ಅರ್ಜಿದಾರರ ಹಕ್ಕಿನಲ್ಲಿರುವ / ಲಭ್ಯವಿರುವ ರಜೆ ಎಂದು, ಉಳಿದ ಅವಧಿಯನ್ನು `ಸಂಬಳರಹಿತ ರಜೆ` ಎಂದು ಪರಿಗಣಿಸುವುದು;

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:30-01-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 369

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಜೆ.ವಿ.ವಾಸು, ಪಿಐ, ಬೆರಳುಮುದ್ರೆ ಘಟಕ, ಕೊಪ್ಪಳ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**

1 ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ/8/40/2003-04, ದಿನಾಂಕ:11-02-2005.
2 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:30-03-05
3 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/40/2003-04, ದಿನಾಂಕ:03-05-2005.
4 ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 155/ಸಿಎಸ್‌ಎಸ್/2005, ದಿನಾಂಕ: 21-01-2006.

**ಪ್ರಸ್ತಾವನೆ:**

ಶ್ರೀ ಜೆ.ವಿ.ವಾಸು, ಪಿಐ, ಬೆರಳುಮುದ್ರೆ ಘಟಕ, ಕೊಪ್ಪಳ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

''ನಿಮಗೆ ದಿನಾಂಕ:07-07-2003ರ ಅಪರಾಹ್ನ ಬೆಂಗಳೂರಿನಲ್ಲಿರುವ ಮಾಜಿ ಪ್ರಧಾನ ಮಂತ್ರಿಗಳ ಭದ್ರತೆ ಕರ್ತವ್ಯದಿಂದ ಬಿಡುಗಡೆ ಮಾಡಲಾಗಿದ್ದರೂ, ನೀವು ದಿನಾಂಕ:24-10-2003ರ ವರೆಗೂ ವರ್ಗಾವಣೆಯಾದ ಸ್ಥಳದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ, ಕರ್ತವ್ಯ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:11.02.2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮ ಅನಾರೋಗ್ಯದ ಕಾರಣ, ವರ್ಗಾವಣೆ ಆದ ಸ್ಥಳಕ್ಕೆ ಹೋಗಲಾಗಲಿಲ್ಲವೆಂದು ವೈದ್ಯಕೀಯ ಪ್ರಮಾಣ ಪತ್ರಗಳನ್ನು ಒದಗಿಸಿರುವ ಹಿನ್ನೆಲೆಯಲ್ಲಿ, ಅರ್ಜಿದಾರರ ಮೇಲ್ಮನವಿಯನ್ನು ಪುರಸ್ಕರಿಸಿ, ಶಿಸ್ತು ಪ್ರಾಧಿಕಾರಿಯ ದಂಡನೆಯನ್ನು ಭಾಗಶ: ಮಾರ್ಪಡಿಸಲು ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:21-01-2006ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿಯನ್ನು ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 126 ಪೊಸಿಅ 2005 ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶಿಸ್ತು ಪ್ರಾಧಿಕಾರಿಯ ದಿನಾಂಕ:11-02-2005ರ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಶ್ರೀ ಜೆ.ವಿ.ವಾಸು, ಪಿಐ ಬೆರಳುಮುದ್ರೆ ಘಟಕ ಕೊಪ್ಪಳ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:30-03-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಕೆಳಕಂಡಂತೆ ಆದೇಶಿಸಿದೆ.

1) ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ಒಂದು ವರ್ಷದ ಅವಧಿಗೆ ಮುಂದೂಡುವುದು;
2) ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವುದು;
3) ಈ ಆದೇಶ ಶಿಸ್ತು ಪ್ರಾಧಿಕಾರಿ ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುವುದು;

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:21-01-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 370

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ವೈ. ವೆಂಕಟೇಶ್, ಎಪಿಸಿ-1820, ಸಿಎಆರ್ (ದಕ್ಷಿಣ) ಬೆಂಗಳೂರು ನಗರ ರವರ ಮೇಲೆ ಶಿಸ್ತು ಕ್ರಮದ ದಂಡನೆಯ ವಿರುದ್ಧ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1 ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್ ನಗರ ಸಶಸ್ತ್ರ ಮೀಸಲು ಪಡೆ (ದಕ್ಷಿಣ) ಬೆಂಗಳೂರು ಇವರ ಆದೇಶ ಸಂಖ್ಯೆ:ಇವಿ/27/ಆರ್-6 96-97 ಓಬಿ ಸಂಖ್ಯೆ:179/98, ದಿನಾಂಕ:31.03.1998.
2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಸಿಎಆರ್ ಮತ್ತು ಭದ್ರತಾ ಪಡೆ, ಬೆಂಗಳೂರು ಇವರ ಆದೇಶ ಸಂಖ್ಯೆ:2/ಅಪೀಲು/98-99 ದಿನಾಂಕ:08-03-99.
3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18-03-05.
4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/55/2005. ದಿನಾಂಕ:06-09-2005.
5 ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 160/ಸಿಎನ್‌ಎಸ್/2005, ದಿನಾಂಕ: 19-01-2006.

**ಪ್ರಸ್ತಾವನೆ:**

ಶ್ರೀ ವೈ.ವೆಂಕಟೇಶ್ ಎಪಿಸಿ-1820 ಸಿಎಆರ್ (ದಕ್ಷಿಣ) ಬೆಂಗಳೂರು ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಆರಕ್ಷಕ ಪೇದೆ 1820, ವೈ.ವೆಂಕಟೇಶ್ ಎಚ್ ಪಂಗಡ, ಸಿಎಆರ್ (ದಕ್ಷಿಣ) ಆಡುಗೋಡಿ, ಬೆಂಗಳೂರು (30) ಆದ ನೀವು ದಿನಾಂಕ:26-12-1995 ರಿಂದ 2 ದಿನಗಳ ಆಕಸ್ಮಿಕ ರಜಾ ಪಡೆದು ದಿನಾಂಕ:29-12-1995 ರಂದು ಕರ್ತವ್ಯಕ್ಕೆ ಹಾಜರಾಗಬೇಕಾಗಿತ್ತು. ಆದರೆ, ನೀವು ದಿನಾಂಕ:29-12-1995 ರಿಂದ 31-03-1996ರ ವರೆಗೆ ಯಾವುದೇ ಮಾಹಿತಿಯನ್ನು ನೀಡದೆ, ಅನಧಿಕೃತವಾಗಿ ಗೈರುಹಾಜರಿಯಾಗಿರುತ್ತೀರಿ. ಇದು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ನಿಮ್ಮ ಅಶಿಸ್ತು, ಬೇಜವಾಬ್ದಾರಿತನ ಹಾಗೂ ಕರ್ತವ್ಯದಲ್ಲಿನ ಅತೀವ ನಿರ್ಲಕ್ಷತೆಯನ್ನು ತೋರಿಸುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಸಿಎಆರ್ (ದಕ್ಷಿಣ) ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:31-03-1998ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪೇದೆಯ ಕನಿಷ್ಟ ವೇತನಕ್ಕೆ ಇಳಿಸಿ, ಒಂದು ವರ್ಷದ ನಂತರ ಹೊಸದಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಪಡೆಯುವ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಸಿಎಆರ್ ಮತ್ತು ಭದ್ರತಾ ಪಡೆ, ಬೆಂಗಳೂರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:08-03-1999ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ಕುಟುಂಬ ಪರಿಸ್ಥಿತಿ (ಕುರುಡ ತಂದೆ, ತಾಯಿ ಕಾಯಿಲೆಯಿಂದ ಕಾಲು ಕಳೆದುಕೊಂಡಿರುವ ಅಂಗವಿಕಲೆ, ಮಗ ಪೋಲೀಯೋದಿಂದ ಅಂಗವಿಕಲ ಹಾಗೂ ಅಕ್ಕ ತಂಗಿಯರ ಜವಾಬ್ದಾರಿಯ ಜೊತೆಗೆ ತನಗೆ ಮೈಯಲ್ಲಿ ಹುಷಾರಿಲ್ಲದ ಕಾರಣ ಗೈರುಹಾಜರಿ ಆಗಿರುವುದು) ಯನ್ನು ಪರಿಗಣಿಸಿ, ಶಿಸ್ತು ಪ್ರಾಧಿಕಾರಿಯ ದಂಡನಾ ಆದೇಶವನ್ನು ಮಾರ್ಪಡಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:19-01-06ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 139 ಪೊಸಿಅ 2005 ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶಿಸ್ತು ಪ್ರಾಧಿಕಾರಿಯ ದಿನಾಂಕ:31-03-1998ರ ಆದೇಶವನ್ನು ರದ್ದುಪಡಿಸಿ, ಶ್ರೀ ವೈ.ವೆಂಕಟೇಶ್, ಎಪಿಸಿ-1820 ಸಿಎಆರ್ (ದಕ್ಷಿಣ) ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:18-03-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1) ಅರ್ಜಿದಾರರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರದಂತೆ ಎರಡು ವರ್ಷಗಳ ಕಾಲ ತಡೆ ಹಿಡಿಯುವುದು;
2) ವೈದ್ಯಕೀಯ ಕಾರಣಗಳಿಂದ ರಜಾ ಅರ್ಜಿ ಸಲ್ಲಿಸಿದ್ದ ದಿನಾಂಕ:29-12-95 ರಿಂದ 31-03-1996ರ ವರೆಗಿನ ಗೈರು ಹಾಜರಿ ಅವಧಿಯನ್ನು `ಅವರ ಹಕ್ಕಿನಲ್ಲಿರುವ ರಜೆ` ಯನ್ನಾಗಿ ಪರಿಗಣಿಸತಕ್ಕದ್ದು;
3) ಈ ಆದೇಶವು ಶಿಸ್ತು ಪ್ರಾಧಿಕಾರಿ ವಿಧಿಸಿದ ದಂಡನಾ ಆದೇಶ ದಿನಾಂಕದಿಂದಲೇ ಜಾರಿಗೆ ಬರತಕ್ಕದ್ದು;

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:19-01-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 387

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2005-2006ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಎರಡನೇ ಕಂತಿನ ರಾಜ್ಯದ ಪಾಲಿನ ಹಣವನ್ನು ಹತ್ತು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** (1) ಆರ್ಥಿಕ (ಜಿಪಂ) ರವರ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 3 ಜಡ್‌ಪಿಎ 2005 ಬೆಂಗಳೂರು , ದಿನಾಂಕ 25-04-2005.

(2) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: 17014 : 10 : 2005 ಡಿಆರ್‌ಡಿಎ (ಎಸ್‌ಆರ್ ನಂ.15) ದಿನಾಂಕ : 13-04-2005, (ಎಸ್‌ಆರ್ ನಂ.36) ದಿನಾಂಕ 29-06-2005, (ಎಸ್‌ಆರ್ ನಂ.42) ದಿನಾಂಕ 25.07.2005, (ಎಸ್ ನಂ.74) ದಿನಾಂಕ 12-12-2005, (ಎಸ್ ನಂ.82) ದಿನಾಂಕ 20-12-2005, (ಎಸ್ ನಂ.105) ದಿನಾಂಕ 30-12-2005, (ಎಸ್ ನಂ.119) ದಿನಾಂಕ 17-01-2006 ಮತ್ತು ಎಸ್ ನಂ (128) ದಿನಾಂಕ 27-01-2006.

(3) ಸರ್ಕಾರದ ಆದೇಶದ ಸಮ ಸಂಖ್ಯೆ ದಿನಾಂಕ 30-05-05, 09-08-05, 28-09-05, 22.12.2005 06-02-06 ಮತ್ತು 22-02-2006.

(4) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ : 17014 : 10 : 2005 ಡಿಆರ್‌ಡಿಎ (ಎಸ್ ನಂ.179) ದಿನಾಂಕ 10.03.2006.

(5) ಸರ್ಕಾರದ ಆದೇಶದ ಸಂಖ್ಯೆ : ಎಫ್‌ಡಿ 07 ಜಿಪಿಎ 2003 ದಿನಾಂಕ 14.07.05.

**ಪ್ರಸ್ತಾವನೆ:**

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮೇಲೆ ಓದಲಾದ (1), (2) ಮತ್ತು (3) ರಂತೆ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಒಂದನೇ ಕಂತಿನ ಹಣ ರೂ.4,74,07,000 ಹಾಗೂ 1,58,02,000 ಮತ್ತು ಎರಡನೇ ಕಂತಿನ ಹಣ ರೂ. ರೂ.3,09,82,000 ಮತ್ತು ರೂ.1,03,27,000 ಗಳನ್ನು ಹದಿನೇಳು ಜಿಲ್ಲಾ ಪಂಚಾಯತ್‌ಗಳಿಗೆ ಕ್ರಮವಾಗಿ ಬಿಡುಗಡೆ ಮಾಡಿವೆ. ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾದ (4) ರಂತೆ ರಾಜ್ಯದ 10 ಜಿಲ್ಲಾ ಪಂಚಾಯತ್‌ಗಳಿಗೆ ರೂ.1,33,52,000 ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಡಿಆರ್‌ಡಿಎ ಆಡಳಿತ ಯೋಜನೆಯಡಿ ಎರಡನೇ ಕಂತಿನ ಹಣ ರೂ.44,51,000 ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಸ್ವಜಯೋ (ಡಿಆರ್‌ಡಿಎ) 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್2006.**

ರಾಜ್ಯ ಸರ್ಕಾರವು ತನ್ನ ಪಾಲಿನ 2ನೇ ಕಂತಿನ ಅನುದಾನವನ್ನು ಅನುಬಂಧದಲ್ಲಿ ತೋರಿಸಿರುವ ಹತ್ತು ಜಿಲ್ಲಾ ಪಂಚಾಯತ್ ಗಳಿಗೆ ರೂ.44,51,000 (ರೂ.ನಲವತ್ತನಾಲ್ಕು ಲಕ್ಷದ ಐವತ್ತೊಂದು ಸಾವಿರ ಮಾತ್ರ) ಗಳನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು :**

1999ರ ಡಿಆರ್‌ಡಿಎ ಆಡಳಿತ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-(ಯೋಜನೆ)-2005-2006 (2515-00-196-1-06) ರಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜಡ್‌ಪಿಎ 2003 ದಿನಾಂಕ 08-09-2004 ಮತ್ತು 14-07-2005 ರನ್ವಯ ಜಿಲ್ಲಾಪಂಚಾಯತ್ ನಿಧಿಗೆ ಜಮೆ ಮಾಡಿಕೊಂಡು ಭರಿಸತಕ್ಕದ್ದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2005-2006 ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಉಪ ಕಾರ್ಯದರ್ಶಿ {ಆಡಳಿತ} ಇವರು ಸರ್ಕಾರಕ್ಕೆ ಸಲ್ಲಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ}, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಗಳನ್ನು, ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 117 ಪಿಬಿಎಸ್ 2006 ದಿನಾಂಕ 15-03-2006 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಬಿ. ಹಿರೇಮಣಿಯವರ್**

ನಿರ್ದೇಶಕರು {ಸ್ವಉಕಾ} ಹಾಗೂ

ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಸ್ವಜಯೋ (ಡಿಆರ್‌ಡಿಎ) 2005, ಬೆಂಗಳೂರು, ದಿನಾಂಕ: 15-03-2006**

**(ರೂ.ಗಳಲ್ಲಿ)**

| ಕ್ರ ಸಂ | ಜಿಲ್ಲಾ ಪಂಚಾಯತ್ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ದಿಂದ ಬಿಡುಗಡೆ ಯಾದ ಎರಡನೇ ಕಂತು | ರಾಜ್ಯ ಸರ್ಕಾರ ಬಿಡುಗಡೆ ಮಾಡಬೇಕಾದ ಎರಡನೇ ಕಂತಿನ ಹಣ |
|---|---|---|---|---|---|
| 1 | ಬಾಗಲಕೋಟೆ | 461 | 2900ZZ0001 | 6,74,000 | 2,25,000 |
| 2 | ಬೆಂಗಳೂರು ನಗರ | 401 | 0100ZZ8001 | 29,55,000 | 9,85,000 |
| 3 | ದಾವಣಗೆರೆ | 451 | 1700ZZ0002 | 1,99,000 | 66,000 |
| 4 | ಗದಗ್ | 462 | 2600ZZ0001 | 0 | 0 |
| 5 | ಗುಲ್ಬರ್ಗಾ | 417 | 3200ZZ0003 | 31,53,000 | 10,51,000 |
| 6 | ಹಾವೇರಿ | 463 | 2700ZZ0001 | 0 | 0 |
| 7 | ಕೊಡಗು | 411 | 1200ZZ0001 | 0 | 0 |
| 8 | ಕೋಲಾರ | 404 | 0700ZZ8002 | 19,66,000 | 6,55,000 |
| 9 | ಮೈಸೂರು | 407 | 0900ZZ0001 | 35,52,000 | 11,84,000 |
| 10 | ರಾಯಚೂರು | 420 | 3600ZZ0001 | 8,53,000 | 2,84,000 |
| | | | **ಒಟ್ಟು:** | **1,33,52,000** | **44,51,000** |

**ಜಿ.ಬಿ. ಹಿರೇಮಣಿಯವರ್**

ಪಿ.ಆರ್. 423

ನಿರ್ದೇಶಕರು {ಸ್ವಉಕಾ} ಹಾಗೂ
ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ವಿಷಯ:** 2005-2006 ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಎರಡನೇ ಕಂತಿನ ರಾಜ್ಯದ ಪಾಲಿನ ಹಣವನ್ನು 9 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** (1) ಆರ್ಥಿಕ (ಜಿಪಂ) ರವರ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 3 ಜಡ್‌ಪಿಎ 2005 ಬೆಂಗಳೂರು , ದಿನಾಂಕ 25-04-2005.

(2) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: 17014 : 10 : 2005 ಡಿಆರ್‌ಡಿಎ (ಎಸ್‌ಆರ್ ನಂ.15) ದಿನಾಂಕ : 13-04-2005, (ಎಸ್‌ಆರ್ ನಂ.36) ದಿನಾಂಕ 29-06-2005, (ಎಸ್‌ಆರ್ ನಂ.42) ದಿನಾಂಕ 25.07.2005, (ಎಸ್ ನಂ.74) ದಿನಾಂಕ 12-12-2005.

(3) ಸರ್ಕಾರದ ಆದೇಶದ ಸಮ ಸಂಖ್ಯೆ ದಿನಾಂಕ 30-05-05, 09-08-05, 28-09-05, 22.12.2005.

(4) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ : 17014 : 10 : 2005 ಡಿಆರ್‌ಡಿಎ (ಎಸ್ ನಂ.82) ದಿನಾಂಕ 20.12.2005 ಮತ್ತು (ಎಸ್ ನಂ.105) ದಿನಾಂಕ 30-12-05.

(5) ಸರ್ಕಾರದ ಆದೇಶದ ಸಂಖ್ಯೆ : ಎಫ್‌ಡಿ 07 ಜಿಪಿಎ 2003 ದಿನಾಂಕ 14-07-05.

**ಪ್ರಸ್ತಾವನೆ:**

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮೇಲೆ ಓದಲಾದ (1), (2) ಮತ್ತು (3) ರಂತೆ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಒಂದನೇ ಕಂತಿನ ಹಣ ರೂ.4,74,07,000 ಹಾಗೂ 1,58,02,000 ಮತ್ತು ಎರಡನೇ ಕಂತಿನ ಹಣ ರೂ. ರೂ.40,83,000 ಮತ್ತು ರೂ.13,61,000 ಗಳನ್ನು ಎರಡು ಜಿಲ್ಲಾ ಪಂಚಾಯತ್‌ಗಳಿಗೆ ಕ್ರಮವಾಗಿ ಬಿಡುಗಡೆ ಮಾಡಿವೆ. ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾದ (4) ರಂತೆ ರಾಜ್ಯದ 9 ಜಿಲ್ಲಾ ಪಂಚಾಯತ್‌ಗಳಿಗೆ ರೂ.1,59,02,000 ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಎಸ್‌ಜಿಎಸ್‌ವೈ ಯಡಿ ಎರಡನೇ ಕಂತಿನ ಹಣ ರೂ.53,01,000 ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಸ್ವಜಯೋ (ಡಿಆರ್‌ಡಿಎ) 2005, ಬೆಂಗಳೂರು, ದಿನಾಂಕ: 06ನೇ ಫೆಬ್ರವರಿ 2006**

ರಾಜ್ಯ ಸರ್ಕಾರವು ಕೆಳಕಂಡ 9 ಜಿಲ್ಲಾ ಪಂಚಾಯತ್‌ಗಳಿಗೆ ರಾಜ್ಯದ ಪಾಲಿನ 2ನೇ ಕಂತಿನ ಹಣ ರೂ.53,01,000 (ರೂ.ಐವತ್ತಮೂರುಲಕ್ಷದ ಒಂದು ಸಾವಿರ ಮಾತ್ರ) ಗಳನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

(ರೂ.ಗಳಲ್ಲಿ)

| ಕ್ರ ಸಂ | ಜಿಲ್ಲಾ ಪಂಚಾಯತ್ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ದಿಂದ ಬಿಡುಗಡೆಯಾದ ಎರಡನೇ ಕಂತು | ರಾಜ್ಯ ಸರ್ಕಾರ ಬಿಡುಗಡೆ ಮಾಡಬೇಕಾದ ಎರಡನೇ ಕಂತಿನ ಹಣ |
|---|---|---|---|---|---|
| 1 | ಬೆಂಗಳೂರು ಗ್ರಾ | 402 | 0300ZZ8001 | 19,58,000 | 6,53,000 |
| 2 | ಬಳ್ಳಾರಿ | 418 | 3400ZZ0001 | 26,44,000 | 8,81,000 |
| 3 | ಬೀದರ್ | 419 | 3800ZZ5701 | 30,78,000 | 10,26,000 |
| 4 | ಚಿಕ್ಕಮಗಳೂರು | 408 | 1800ZZ0017 | 15,23,000 | 5,08,000 |
| 5 | ಚಿತ್ರದುರ್ಗ | 403 | 1600ZZ0001 | 22,50,000 | 7,50,000 |
| 6 | ದ.ಕನ್ನಡ | 409 | 1900ZZ0047 | 2,37,000 | 79,000 |
| 7 | ಹಾಸನ | 410 | 1300ZZ0003 | 23,05,000 | 7,68,000 |
| 8 | ಕೊಪ್ಪಳ | 466 | 1500ZZ0010 | 10,59,000 | 3,53,000 |
| 9 | ಉಡುಪಿ | 457 | 2000ZZ0001 | 8,48,000 | 2,83,000 |
| | | | ಒಟ್ಟು: | **1,59,02,000** | **53,01,000** |

**ಷರತ್ತುಗಳು :**

1999ರ ಡಿಆರ್‌ಡಿಎ ಆಡಳಿತ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ಯಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ- (ಯೋಜನೆ) -2005-2006 (2515-00-196-1-06) ರಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜಡ್‌ಪಿಎ 2003 ದಿನಾಂಕ 08-09-2004 ಮತ್ತು 14.07.2005 ರನ್ವಯ ಜಿಲ್ಲಾಪಂಚಾಯತ್ ನಿಧಿಗೆ ಜಮೆ ಮಾಡಿಕೊಂಡು ಭರಿಸತಕ್ಕದ್ದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2005-2006 ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಉಪ ಕಾರ್ಯದರ್ಶಿ {ಆಡಳಿತ} ಇವರು ಸರ್ಕಾರಕ್ಕೆ ಸಲ್ಲಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ}, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಗಳನ್ನು, ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 70 ಪಿಬಿಎಸ್ 2006 ದಿನಾಂಕ 02-02-2006 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಬಿ. ಹಿರೇಮಣಿಯವರ್**

ನಿರ್ದೇಶಕರು {ಸ್ವಉಕಾ} ಹಾಗೂ

ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 281

**ವಿಷಯ:** 2005-2006 ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಹಣವನ್ನು ಬಳ್ಳಾರಿ, ಚಾಮರಾಜನಗರ ಮತ್ತು ಮೈಸೂರು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** (1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ 17013 : 10 : 2005 ಎಸ್‌ಜಿಎಸ್‌ವೈ - I (10) ದಿನಾಂಕ : 11-04-2005 (53) ದಿನಾಂಕ 08-11-2005, (62) ದಿನಾಂಕ : 05-12-2005, (77) ದಿನಾಂಕ 15-12-2005, (91) ದಿನಾಂಕ 26-12-2005, (104) ದಿನಾಂಕ 30-12-2005 ಮತ್ತು (147), ದಿನಾಂಕ: 10-02-2006.

(2) ರಾಜ್ಯ ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 12 ಸ್ವಜಯೋ 05 ದಿನಾಂಕ 23-05-2005, 21-06-2005 (ತಿದ್ದುಪಡಿ), 22-12-2005, 03-02-2006 ಮತ್ತು 27-02-2006.

(3) ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 8 ಎಸ್‌ಜೆವೈ 2006 ದಿನಾಂಕ 03-03-2006.

**ಪ್ರಸ್ತಾವನೆ:**

ಕೇಂದ್ರ ಮತ್ತು ರಾಜ್ಯ ಸರ್ಕಾರ ಮೇಲೆ ಓದಲಾದ (1) ಮತ್ತು (2) ರಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಒಂದನೇ ಕಂತಿನ ಹಣ ರೂ.19,19,09,000 ಹಾಗೂ 6,39,70,000 ಮತ್ತು ಎರಡನೇ ಕಂತಿನ ಹಣ ರೂ. 16,55,05,000 ಹಾಗೂ ರೂ.4,80,34,000 ಗಳನ್ನು ಇಪ್ಪತ್ತಾರು ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಿವೆ. ಪ್ರಧಾನ ಲೆಕ್ಕ ಶೀರ್ಷಿಕೆ 2501 ರಡಿ ಜಿಲ್ಲೆಯಲ್ಲಿ ಉಳಿದಿರುವ ಹಣದಿಂದ ಬಳ್ಳಾರಿ, ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಗಳಿಗೆ ರೂ.71,33,000 ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 12 ಸ್ವಜಯೋ 2005, ಬೆಂಗಳೂರು, ದಿನಾಂಕ : 13ನೇ ಮಾರ್ಚ್ 2006**

ರಾಜ್ಯ ಸರ್ಕಾರವು ಬಳ್ಳಾರಿ, ಚಾಮರಾಜನಗರ ಮತ್ತು ಮೈಸೂರು ಜಿಲ್ಲಾ ಪಂಚಾಯತ್‌ಗಳಿಗೆ ರೂ.71,33,000 (ರೂ. ಎಪ್ಪತ್ತೊಂದು ಲಕ್ಷದ ಮೂವತ್ತ ಮೂರು ಸಾವಿರ ಮಾತ್ರ) ಗಳನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ ಸಂ. | ಜಿಲ್ಲಾ ಪಂಚಾಯತ್ ಹೆಸರು | ಜಿ.ಪಂ.ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರದಿಂದ ಬಿಡುಗಡೆ ಯಾದ ಎರಡನೇ ಕಂತು | ರಾಜ್ಯ ಸರ್ಕಾರ ಬಿಡುಗಡೆ ಮಾಡ ಬೇಕಾಗಿದ್ದ ಎರಡನೇ ಕಂತಿನ ಹಣ | ರಾಜ್ಯ ಸರ್ಕಾರ ಈಗಾಗಲೇ ಬಿಡುಗಡೆ ಮಾಡಿದ ಎರಡನೇ ಕಂತಿನ ಹಣ | ಈಗ ಬಿಡುಗಡೆ ಮಾಡುತ್ತಿರುವ ರಾಜ್ಯದ ಪಾಲಿನ ಎರಡನೇ ಕಂತಿನ ಬಾಕಿ ಹಣ |
|---|---|---|---|---|---|---|---|
| 1 | ಬಳ್ಳಾರಿ | 418 | 3400ZZ0001 | 1,15,72,000 | 38,57,000 | 8,57,000 | 30,00,000 |
| 2 | ಚಾಮರಾಜನಗರ | 456 | 1000ZZ0001 | 1,02,20,000 | 34,07,000 | 20,07,000 | 14,00,000 |
| 3 | ಮೈಸೂರು | 407 | 0900ZZ0001 | 81,98,000 | 27,33,000 | - | 27,33,000 |
| | | | | **2,99,90,000** | **99,97,000** | **28,64,000** | **71,33,000** |

**ಷರತ್ತುಗಳು ಕೆಳಕಂಡಂತಿವೆ:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದಲ್ಲಿ ನಡುವೆ 75 : 25 ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-198- ಗ್ರಾಮ ಪಂಚಾಯತ್‌ಗಳಿಗೆ ಸಹಾಯ-1-ಗ್ರಾಮ ಪಂಚಾಯತ್‌ಗಳು-01-ಬ್ಲಾಕ್ ಅನುದಾನ (ಯೋಜನೆ) (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2005-2006 (2501-01-198-1-01) ರಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 7 ಜಡ್‌ಪಿಎ 2003 ದಿನಾಂಕ 14-07-2005 ರನ್ವಯ ಎಸ್‌ಜಿಎಸ್‌ವೈ ಯಡಿ ತೆರೆದಿರುವ ಗ್ರಾಮ ಪಂಚಾಯತ್‌ಗಳ ಬ್ಯಾಂಕ್ ಖಾತೆಗೆ ಚೆಕ್ ಮೂಲಕ ಬಿಡುಗಡೆ ಮಾಡುವುದು.

ಬಳ್ಳಾರಿ, ಚಾಮರಾಜನಗರ ಮತ್ತು ಮೈಸೂರು ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿ ಗ್ರಾಮ ಪಂಚಾಯತಿಗಳ ಸಂಬಂಧಿಸಿದ ಬ್ಯಾಂಕ್ ಖಾತೆಗೆ ಅನುದಾನ ಜಮೆ ಮಾಡುವ ಬಗ್ಗೆ ಕ್ರಮಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2005-2006 ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಉಪ ಕಾರ್ಯದರ್ಶಿ {ಅಡಳಿತ} ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಆಯಾಯ ಮಾಹೆಯ ಪ್ರಗತಿ ವರದಿಯನ್ನು ಮುಂದಿನ ತಿಂಗಳ 10 ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ}, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಬಳ್ಳಾರಿ, ಚಾಮರಾಜನಗರ ಮತ್ತು ಮೈಸೂರು ಜಿಲ್ಲಾ ಪಂಚಾಯತ್ ಇವರುಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ ಗ್ರಾಅಪ 116 ಪಿಬಿಎಸ್ 2006 ದಿನಾಂಕ 23-02-2006 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಬಿ. ಹಿರೇಮಣಿಯವರ್**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 424

**ವಿಷಯ:** 2005-2006 ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಹಣವನ್ನು ರಾಜ್ಯದ 22 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** (1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ 17013 : 10 : 2005 ಎಸ್‌ಜಿಎಸ್‌ವೈ - I (10) ದಿನಾಂಕ : 11-04-2005 (53) ದಿನಾಂಕ 08-11-2005 ಮತ್ತು (62) ದಿನಾಂಕ : 05-12-2005.

(2) ರಾಜ್ಯ ಸರ್ಕಾರದ ಆದೇಶ ಪತ್ರ ಸಂಖ್ಯೆ : ಗ್ರಾಅಪ 12 ಸ್ವಜಯೋ 05 ದಿನಾಂಕ 23-05-2005, 21.06.2005 (ತಿದ್ದುಪಡಿ) ಮತ್ತು 22-12-2005.

(3) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ : 17013 : 10 : 2005 - ಎಸ್‌ಜಿಎಸ್‌ವೈ I (77) , ದಿನಾಂಕ: 15.12.2005, (91) ದಿನಾಂಕ 26-12-2005 ಮತ್ತು (104) ದಿನಾಂಕ: 30-12-2005.

**ಪ್ರಸ್ತಾವನೆ:**

ಕೇಂದ್ರ ಮತ್ತು ರಾಜ್ಯ ಸರ್ಕಾರ ಮೇಲೆ ಓದಲಾದ (1) ಮತ್ತು (2) ರಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಒಂದನೇ ಕಂತಿನ ಹಣ ರೂ.19,19,09,000 ಹಾಗೂ 6,39,70,000 ಮತ್ತು ಎರಡನೇ ಕಂತಿನ ಹಣ ರೂ. 2,05,57,000 ಹಾಗೂ ರೂ.68,52,000 ಗಳನ್ನು ಮೂರು ಜಿಲ್ಲಾ ಪಂಚಾಯತ್‌ಗಳಿಗೆ ಕ್ರಮವಾಗಿ ಬಿಡುಗಡೆ ಮಾಡಿವೆ. ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾದ (3) ರಂತೆ ರಾಜ್ಯದ 22 ಜಿಲ್ಲಾ ಪಂಚಾಯತ್‌ಗಳಿಗೆ ರೂ.14,18,82,000 ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಎಸ್‌ಜಿಎಸ್‌ವೈ ಯಡಿ ಎರಡನೇ ಕಂತಿನ ಹಣ ರೂ.4,72,94,000 ಬಿಡುಗಡೆ ಮಾಡಬೇಕಿತ್ತು. ಆದರೆ, 2005-06 ನೇ ಸಾಲಿನ ಆಯವ್ಯಯದಲ್ಲಿ ಜಿಲ್ಲೆಯಲ್ಲಿ ಲಭ್ಯವಿರುವ ಆಧಾರದ ಹಣದ ಮೇಲೆ 22 ಜಿಲ್ಲಾ ಪಂಚಾಯತ್‌ಗಳಿಗೆ ರೂ.4,01,60,000 (ರೂ. ನಾಲ್ಕು ಕೋಟಿ ಒಂದು ಲಕ್ಷದ ಅರವತ್ತು ಸಾವಿರ ಮಾತ್ರ) ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 12 ಸ್ವಜಯೋ 2005, ಬೆಂಗಳೂರು, ದಿನಾಂಕ: 03ನೇ ಫೆಬ್ರವರಿ 2006**

ರಾಜ್ಯ ಸರ್ಕಾರವು ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವ 22 ಜಿಲ್ಲಾ ಪಂಚಾಯತ್‌ಗಳಿಗೆ ಎರಡನೇ ಕಂತಿನ ಹಣ ರೂ.4,01,60,000 (ರೂ. ನಾಲ್ಕು ಕೋಟಿ ಒಂದು ಲಕ್ಷದ ಅರವತ್ತು ಸಾವಿರ ಮಾತ್ರ) ಗಳನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು ಕೆಳಕಂಡಂತಿವೆ:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದಲ್ಲಿ ನಡುವೆ 75 : 25 ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-198- ಗ್ರಾಮ ಪಂಚಾಯತ್‌ಗಳಿಗೆ ಸಹಾಯ-1-ಗ್ರಾಮ ಪಂಚಾಯತ್‌ಗಳು-01-ಬ್ಲಾಕ್ ಅನುದಾನ (ಯೋಜನೆ) (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2005-2006 (2501-01-198-1-01) ರಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 7 ಜಡ್‌ಪಿಎ 2003 ದಿನಾಂಕ 14-07-2005 ರನ್ವಯ ಎಸ್‌ಜಿಎಸ್‌ವೈ ಯಡಿ ತೆರೆದಿರುವ ಗ್ರಾಮ ಪಂಚಾಯತ್‌ಗಳ ಬ್ಯಾಂಕ್ ಖಾತೆಗೆ ಚೆಕ್ ಮೂಲಕ ಬಿಡುಗಡೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿ ಗ್ರಾಮ ಪಂಚಾಯತಿಗಳ ಸಂಬಂಧಿಸಿದ ಬ್ಯಾಂಕ್ ಖಾತೆಗೆ ಅನುದಾನ ಜಮೆ ಮಾಡುವ ಬಗ್ಗೆ ಕ್ರಮಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2005-2006 ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಉಪ ಕಾರ್ಯದರ್ಶಿ {ಆಡಳಿತ} ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಆರ್ಯ ಮಾಹೆಯ ಪ್ರಗತಿ ವರದಿಯನ್ನು ಮುಂದಿನ ತಿಂಗಳ 10 ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ}, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ ಗ್ರಾಅಪ 63 ಪಿಬಿಎಸ್ 2006 ದಿನಾಂಕ 02-02-2006 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಬಿ. ಹಿರೇಮಣಿಯವರ್**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 12 ಸ್ವಜಯೋ 2005, ಬೆಂಗಳೂರು, ದಿನಾಂಕ: 03-02-2006**

**(ರೂ.ಗಳಲ್ಲಿ)**

| ಕ್ರ ಸಂ | ಜಿಲ್ಲಾ ಪಂಚಾಯತ್ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ದಿಂದ ಬಿಡುಗಡೆ ಯಾದ ಎರಡನೇ ಕಂತು | ರಾಜ್ಯ ಸರ್ಕಾರ ಬಿಡುಗಡೆ ಮಾಡಬೇಕಾದ ಎರಡನೇ ಕಂತಿನ ಹಣ | 2005-2006 ನೇ ಆಯವ್ಯಯದಲ್ಲಿ ಜಿಲ್ಲಾವಾರು ಲಭ್ಯವಿರುವ ಹಣದಂತೆ ಬಿಡುಗಡೆ ಮಾಡಿದ ರಾಜ್ಯ ಪಾಲಿನ ಎರಡನೇ ಕಂತು |
|---|---|---|---|---|---|---|
| 1 | ಬೆಂಗಳೂರು ನಗರ | 401 | 0100ZZ8001 | 17,64,000 | 5,88,000 | 5,88,000 |
| 2 | ಬಾಗಲಕೋಟೆ | 461 | 2900ZZ0001 | 49,27,000 | 16,42,000 | 16,42,000 |
| 3 | ಬೆಳಗಾಂ | 413 | 2200ZZ0002 | 1,16,67,000 | 38,89,000 | 38,89,000 |
| 4 | ಬಳ್ಳಾರಿ * | 418 | 3400ZZ0001 | 1,15,72,000 | 38,57,000 | 8,57,000 |
| 5 | ಬೀದರ್ | 419 | 3800ZZ5701 | 82,01,000 | 27,34,000 | 27,34,000 |
| 6 | ಬಿಜಾಪುರ | 414 | 2800ZZ9152 | 44,50,000 | 14,83,000 | 14,83,000 |
| 7 | ಚಾಮರಾಜನಗರ * | 456 | 1000ZZ0001 | 1,02,20,000 | 34,07,000 | 20,07,000 |
| 8 | ಚಿಕ್ಕಮಗಳೂರು | 408 | 1800ZZ0017 | 44,17,000 | 14,72,000 | 14,72,000 |
| 9 | ಚಿತ್ರದುರ್ಗ | 403 | 1600ZZ0001 | 82,43,000 | 27,48,000 | 27,47,000 |

| ಕ್ರ ಸಂ | ಜಿಲ್ಲಾ ಪಂಚಾಯತ್ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ದಿಂದ ಬಿಡುಗಡೆ ಯಾದ ಎರಡನೇ ಕಂತು | ರಾಜ್ಯ ಸರ್ಕಾರ ಬಿಡುಗಡೆ ಮಾಡಬೇಕಾದ ಎರಡನೇ ಕಂತಿನ ಹಣ | 2005-2006 ನೇ ಆಯವ್ಯಯದಲ್ಲಿ ಜಿಲ್ಲಾವಾರು ಲಭ್ಯವಿರುವ ಹಣದಂತೆ ಬಿಡುಗಡೆ ಮಾಡಿದ ರಾಜ್ಯ ಪಾಲಿನ ಎರಡನೇ ಕಂತು |
|---|---|---|---|---|---|---|
| 10 | ದಾವಣಗೆರೆ | 451 | 1700ZZ0002 | 66,54,000 | 22,18,000 | 22,18,000 |
| 11 | ದ.ಕನ್ನಡ | 409 | 1900ZZ0047 | 44,80,000 | 14,93,000 | 14,93,000 |
| 12 | ಧಾರವಾಡ | 415 | 2500ZZ8798 | 31,07,000 | 10,36,000 | 10,36,000 |
| 13 | ಗದಗ್ | 462 | 2600ZZ0001 | 36,55,000 | 12,18,000 | 12,18,000 |
| 14 | ಹಾಸನ | 410 | 1300ZZ0003 | 39,53,000 | 13,18,000 | 13,18,000 |
| 15 | ಕೋಲಾರ | 404 | 0700ZZ8002 | 37,38,000 | 12,46,000 | 12,46,000 |
| 16 | ಕೊಪ್ಪಳ | 466 | 1500ZZ0010 | 1,03,50,000 | 34,50,000 | 34,50,000 |
| 17 | ಮಂಡ್ಯ | 412 | 1100ZZ0001 | 51,24,000 | 17,08,000 | 17,08,000 |
| 18 | ಮೈಸೂರು * | 407 | 0900ZZ0001 | 81,98,000 | 27,33,000 | - |
| 19 | ಶಿವಮೊಗ್ಗ | 405 | 1400ZZ0002 | 55,46,000 | 18,49,000 | 18,49,000 |
| 20 | ತುಮಕೂರು | 406 | 0800ZZ0001 | 1,11,16,000 | 37,05,000 | 37,05,000 |
| 21 | ಉಡುಪಿ | 457 | 2000ZZ0001 | 36,46,000 | 12,15,000 | 12,15,000 |
| 22 | ಹಾವೇರಿ | 463 | 2700ZZ0001 | 68,54,000 | 22,85,000 | 22,85,000 |
| | | | **ಒಟ್ಟು:** | **14,18,82,000** | **4,72,92,000** | **4,01,60,000** |

* ಬಳ್ಳಾರಿ, ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಗಳಿಗೆ ಆಯವ್ಯಯದಲ್ಲಿ ಕಡಿಮೆ ಒದಗಿಸಿರುವುದರಿಂದ ಲಭ್ಯತೆ ಆಧಾರದ ಮೇಲೆ ಬಿಡುಗಡೆ ಮಾಡಲಾಗಿದೆ.

**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 266

**ವಿಷಯ:** 2005-2006 ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಹಣವನ್ನು ಉತ್ತರ ಕನ್ನಡ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** (1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ 17013 : 10 : 2005 ಎಸ್‌ಜಿಎಸ್‌ವೈ- I (10) ದಿನಾಂಕ: 11-04-2005 (53) ದಿನಾಂಕ 08-11-2005, (62) ದಿನಾಂಕ : 05.12.2005, (77) ದಿನಾಂಕ 15-12-2005, (91) ದಿನಾಂಕ 26-12-2005 ಮತ್ತು (104) ದಿನಾಂಕ 30.12.2005.

(2) ರಾಜ್ಯ ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 12 ಸ್ವಜಯೋ 05 ದಿನಾಂಕ 23-05-2005, 21.06.2005 (ತಿದ್ದುಪಡಿ), 22-12-2005 ಮತ್ತು 03-02-2006.

(3) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ : 17013 : 10 : 2005 - ಎಸ್‌ಜಿಎಸ್‌ವೈ I (147) , ದಿನಾಂಕ: 10.02.2006.

**ಪ್ರಸ್ತಾವನೆ:**

ಕೇಂದ್ರ ಮತ್ತು ರಾಜ್ಯ ಸರ್ಕಾರ ಮೇಲೆ ಓದಲಾದ (1) ಮತ್ತು (2) ರಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಒಂದನೇ ಕಂತಿನ ಹಣ ರೂ.19,19,09,000 ಹಾಗೂ 6,39,70,000 ಮತ್ತು ಎರಡನೇ ಕಂತಿನ ಹಣ ರೂ. 16,24,39,000 ಹಾಗೂ ರೂ.4,70,12,000 ಗಳನ್ನು ಇಪತ್ತೈದು ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಿವೆ. ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾದ (3) ರಂತೆ ರಾಜ್ಯದ ಉತ್ತರ ಕನ್ನಡ ಜಿಲ್ಲಾ ಪಂಚಾಯತ್‌ಗೆ ರೂ.30,66,000 ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಎಸ್‌ಜಿಎಸ್‌ವೈ ಯಡಿ ಎರಡನೇ ಕಂತಿನ ಹಣ ರೂ.10,22,000 ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

ಇ) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ -- ಸದಸ್ಯರು
ಈ) ಕಾರ್ಯದರ್ಶಿಗಳು, ಅರಣ್ಯ ಇಲಾಖೆ -- ಸದಸ್ಯರು
ಉ) ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು -- ಸದಸ್ಯ ಕಾರ್ಯದರ್ಶಿ
(ಆಡಳಿತ, ಸಿಬ್ಬಂದಿ ಮತ್ತು ಸಮನ್ವಯ)

ಈ ಸಮಿತಿಗಳು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿನ ಮಾರ್ಗಸೂಚಿಯಂತೆ ಕಾರ್ಯ ನಡೆಸತಕ್ಕದ್ದು.

ಜಿಲ್ಲಾ ಮಟ್ಟದ ಸಮಿತಿಗಳು ಅನುಬಂಧದಲ್ಲಿನ ಮಾರ್ಗಸೂಚಿಯಲ್ಲಿ ಸ್ಪಷ್ಟವಾಗಿ ತಿಳಿಸಿರುವ ವಿವಿಧ ಕಾರ್ಯಗಳಲ್ಲದೆ, ಅನಧಿಕೃತ ವ್ಯವಸಾಯವು ಕಂದಾಯ ಭೂಮಿಯಲ್ಲಿ ನಡೆದಿದೆಯೇ ಅಥವಾ ಅರಣ್ಯ ಪ್ರದೇಶದಲ್ಲಿ ನಡೆದಿದೆಯೇ ಎಂಬ ಅಂಶವನ್ನು ಸಹ ನಿರ್ಧರಿಸುವುದು.

ಈ ಹಿಂದೆ ನಡೆಸಿರುವ ಬುಡಕಟ್ಟು ಜನಾಂಗ ಮತ್ತು ಅರಣ್ಯವಾಸಿಗಳ ಭೂಮಿ ಹಕ್ಕುಬಾಧ್ಯತೆಗೆ ಸಂಬಂಧಪಟ್ಟಂತಹ ಪ್ರಕ್ರಿಯೆಯಲ್ಲಿ ಅನರ್ಹರೆಂದು ಪರಿಗಣಿಸಿರುವ ಪ್ರಕರಣಗಳನ್ನು ಈಗ ಪುನ: ಈ ಸಮಿತಿಗಳು ಪುನರಾವಲೋಕಿಸತಕ್ಕದ್ದು.

ಈ ಆದೇಶದ ಉದ್ದೇಶವು ಅರಣ್ಯ ಭೂಮಿಯಲ್ಲಿ ದಿನಾಂಕ: 24–10–1980 ಮತ್ತು ಅದಕ್ಕಿಂತ ಹಿಂದಿನಿಂದಲೂ ಅರಣ್ಯದಲ್ಲಿ ವಾಸಿಸುತ್ತಿರುವ ಮತ್ತು ಸಾಗುವಳಿ ಮಾಡುತ್ತಿರುವ ಬುಡಕಟ್ಟು ಜನಾಂಗದವರ ಮತ್ತು ಅರಣ್ಯವಾಸಿಗಳ ಹಕ್ಕುಬಾಧ್ಯತೆಗಳನ್ನು ಪರಿಶೀಲಿಸಿ ದಾಖಲೀಕರಿಸುವ ಪ್ರಕ್ರಿಯೆಗೆ ಮಾತ್ರ ಸೀಮಿತಗೊಂಡಿದ್ದು, ಭವಿಷ್ಯದಲ್ಲಿ ಇದರ ಅನುಷ್ಠಾನವು ಸರ್ವೋಚ್ಚ ನ್ಯಾಯಾಲಯದ ಅಂತಿಮ ಆದೇಶಕ್ಕೊಳಪಟ್ಟಿದೆ.

ಸರ್ಕಾರಿ ಆದೇಶ ಸಂಖ್ಯೆ: ಅಪಜೀ 361 ಎಫ್‌ಜಿಎಲ್ 2002 (ಭಾಗ) ದಿನಾಂಕ: 1–12–2003 ರಲ್ಲಿ ನಿರ್ಧರಿಸಿದಂತೆ, ಈಗಾಗಲೇ ರಚಿಸಿರುವ ಹಾಗೂ ಕಾರ್ಯನಿರ್ವಹಿಸುತ್ತಿರುವ ತಾಲ್ಲೂಕು ಮಟ್ಟದ ಸಮಿತಿಗಳನ್ನು ಹಾಗೂ ದಿನಾಂಕ: 8.9.2005ರಆದೇಶ ಸಂಖ್ಯೆ: ಅಪಜೀ 173 ಎಫ್‌ಜಿಎಲ್ 2005 ರಲ್ಲಿ ರಚಿಸಿರುವ ಜಿಲ್ಲಾಮಟ್ಟದ ಸಮಿತಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಆರ್. ವತ್ಸಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 226 ಎಫ್‌ಜಿಎಲ್ 2005 ದಿನಾಂಕ: 6–3–2006ರ ಅನುಬಂಧ**

**ಸಮಿತಿಗಳು ಅನುಸರಿಸಬೇಕಾದ ಕಾರ್ಯವಿಧಾನ**

ಅ) ಅರಣ್ಯ ಭೂಮಿಯ ಮೇಲೆ ಅಕ್ರಮವಾದ ಅರಣ್ಯ ವಸತಿಗಳು ಮತ್ತು ನೀಡಲಾದ ಪಟ್ಟಾಗಳು ಹಾಗೂ ಗುತ್ತಿಗೆಗಳಿಂದ ಉದ್ಭವಿಸುವ ವಿವಾದಾಸ್ಪದ ಕ್ಲೇಮುಗಳಿಗೆ ಸಂಬಂಧಿಸಿದ ಎಲ್ಲಾ ಕ್ಲೇಮುಗಳನ್ನು ಪರಿಶೀಲಿಸುವುದು ಅಗತ್ಯ. ಇದನ್ನು ದಿನಾಂಕ: 18–9–1990ರ ಭಾರತ ಸರ್ಕಾರದ ಮಾರ್ಗಸೂಚಿಗಳ ಅಧಿಕಾರ ವ್ಯಾಪ್ತಿಯೊಳಗೆ ಮಾಡಲಾಗುವುದು. ಈ ಕ್ಲೇಮುಗಳು ವೈಯಕ್ತಿಕ ಜಮೀನುಗಳ ಮೇಲಿನ ಕ್ಲೇಮುಗಳನ್ನು ಮಾತ್ರವಲ್ಲದೆ ಸಮಷ್ಠಿ / ಸಮುದಾಯ ಮಾಲೀಕತ್ವದ ಕ್ಲೇಮುಗಳನ್ನು ಸಹ ಒಳಗೊಂಡಿರಬೇಕು ಮತ್ತು ಅದು ರೂಢಿಗತ ಬಳಕೆಯ ಮತ್ತು/ ಅಥವಾ ಈ ಹಿಂದಿನ ರಾಜ ಪ್ರಭುತ್ವ / ಜಮೀನ್ದಾರಿ ಆಡಳಿತದಿಂದ ಅನುಮತಿಸಲ್ಪಟ್ಟ ಬಳಕೆಯ ಆಧಾರದ ಮೇಲೆ ಸುತ್ತಮುತ್ತಲಿನ ಅರಣ್ಯಗಳಿಂದ ಪಡೆಯುವ ಅರಣ್ಯ ಉತ್ಪನ್ನಗಳ ಮೇಲಿನ ಕ್ಲೇಮುಗಳನ್ನು ಒಳಗೊಂಡಿರಬೇಕು. ಸಾಗುವಳಿದಾರರನ್ನು ಮತ್ತು ಹಿಂದಿನ ಕೃಷಿಕ ಸಮುದಾಯದವರನ್ನು ಸ್ಥಳಾಂತರಿಸುವ ಬಗೆಗಿನ ಕ್ಲೇಮುಗಳನ್ನು ಸಹ ಅಂತಹ ಒಂದು ಚೌಕಟ್ಟಿನ ವ್ಯಾಪ್ತಿಯೊಳಗೆ ಬಗೆಹರಿಸತಕ್ಕದ್ದು.

ಆ) i) ಸಂಬಂಧಪಟ್ಟ ಎಲ್ಲಾ ಕ್ಲೇಮುದಾರರಿಗೆ ತಿಳಿಸಲಾಗಿದೆ.

ii) ಎಲ್ಲಾ ಕ್ಲೇಮುದಾರರಿಗೆ ಅವರ ಭಾಷೆಯಲ್ಲೇ ಅವರ ಕ್ಲೇಮುಗಳನ್ನು ಸಲ್ಲಿಸಲು ಅವಕಾಶ ನೀಡಲಾಗಿದೆ.

iii) ಸಮುದಾಯದ ದುರ್ಬಲ ವರ್ಗಗಳಿಗೆ ಪ್ರಯಾಣದ ಸಮಯ ಮತ್ತು ವೆಚ್ಚವನ್ನು ಎಲ್ಲರಿಗಿಂತಲೂ ಹೆಚ್ಚಿಗೆ ನೀಡಲಾಗಿದೆ.

vi) ಎಲ್ಲಾ ಕ್ಲೇಮುದಾರರನ್ನು ಸೇರಿಸಿಕೊಳ್ಳಲಾಗಿದೆ ಮತ್ತು ಅಹವಾಲನ್ನು ಹೇಳಿಕೊಳ್ಳುವ ಅವಕಾಶವನ್ನು ನೀಡದಿರುವಂಥ ಯಾರೇ ವ್ಯಕ್ತಿ ಇರುವುದಿಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳುವ ದೃಷ್ಟಿಯಿಂದ, ಸ್ಥಳೀಯ ಸಮಿತಿಯು ನಿರ್ದಿಷ್ಟವಾಗಿ ಈ ಉದ್ದೇಶಕ್ಕಾಗಿಯೇ ಕರೆದ ಗ್ರಾಮದ ಗ್ರಾಮಸಭಾ ಸಭೆಗಳಲ್ಲಿ ಕ್ಲೇಮುಗಳ ಆಹ್ವಾನ ಮತ್ತು ಪರಿಶೀಲನೆಯನ್ನು ಮಾಡತಕ್ಕದ್ದು.

ಇ) i) ಸಮಿತಿಯ ಸದಸ್ಯರಾಗಿ ಕಾರ್ಯನಿರ್ವಹಿಸಲು, ಗ್ರಾಮದ ಇಬ್ಬರು ಹಿರಿಯರನ್ನು ಅಥವಾ ಹಿರಿಯ ನಾಗರೀಕರನ್ನು ಆಯ್ಕೆ ಮಾಡಲು.

ii) ಸ್ಥಳೀಯ ಸಮಿತಿಗಾಗಿ ಸಾಕ್ಷ್ಯದ ಸಮರ್ಥನೆಯುಳ್ಳ ಕ್ಲೇಮುಗಳನ್ನು ಆಹ್ವಾನಿಸಲು.

iii) ಸ್ಥಳೀಯ ಸಮಿತಿಗಾಗಿ ಕ್ಲೇಮುಗಳನ್ನು ಪರಿಶೀಲಿಸಲು ಹಾಗೂ ಅದರ ತೀರ್ಮಾನಗಳನ್ನು ಮಂಡಿಸಲು ಗ್ರಾಮಸಭೆಯ ಸಭೆಗಳ ದಿನಾಂಕ ಮತ್ತು ವೇಳೆಗಳನ್ನು ಸೂಚಿಸುವ ವೇಳಾ ಪಟ್ಟಿಯನ್ನು ಸಿದ್ಧಪಡಿಸಿ ಅದನ್ನು ನಿಗದಿತ ಕಾಲಾವಧಿಗೆ ಮುಂಚಿತವಾಗಿ ಪ್ರಕಟಿಸಬೇಕು.

ಈ) ಸ್ಥಳೀಯ ಮಹಿಳೆಯರು ಮತ್ತು ಪುರುಷರ ಸಹಭಾಗಿತ್ವವನ್ನು ಹೆಚ್ಚಿಸಲು ಒಂದು ವ್ಯವಸ್ಥಿತವಾದ ಮತ್ತು ನಿಯಮಿತವಾದ ರೀತಿಯಲ್ಲಿ ಪ್ರಕ್ರಿಯೆಯು ನಡೆಯುತ್ತಿದೆ ಎಂಬುದನ್ನು ಖಚಿತಪಡಿಸಿಕೊಳ್ಳಲು ಕ್ಷೇತ್ರಮಟ್ಟದಲ್ಲಿ

ಕಂದಾಯ, ಬುಡಕಟ್ಟು ಜನಾಂಗದ ಕಲ್ಯಾಣ ಮತ್ತು ಅರಣ್ಯ ಇಲಾಖೆಗಳಿಂದ ತಲಾ ಒಬ್ಬೊಬ್ಬ ಅಧಿಕಾರಿಗಳನ್ನು ಒಳಗೊಂಡಿರುವ ಒಂದು ತಂಡವನ್ನು ನೇಮಿಸಬೇಕು.

ಉ) ಕ್ಲೇಮುಗಳ ಅರ್ಹತೆಯನ್ನು ನಿರ್ಧರಿಸುವ ಕಾರ್ಯಕ್ರಮದ ಬಗ್ಗೆ ಜನರಿಗೆ ತಿಳಿಸಲು ಸ್ಥಳೀಯ ಭಾಷೆಯಲ್ಲಿ ಸಾಂಪ್ರದಾಯಿಕ ಪ್ರಚಾರದ ವಿಧಾನಗಳನ್ನು ಬಳಸಿಕೊಳ್ಳಬೇಕು. ಸ್ವ–ಸಹಾಯ ಸಂಘಗಳು ಮತ್ತು ಮಹಿಳಾ ಮಂಡಲಗಳಂಥ ಸಂಘಟನೆಗಳ ಮುಖಾಂತರ ನಿರ್ದಿಷ್ಟವಾಗಿ ಗ್ರಾಮೀಣ ಮಹಿಳೆಯರಿಗೆ ಕಾರ್ಯಪ್ರಗತಿಯ ಬಗ್ಗೆ ಮಾಹಿತಿಯನ್ನು ಪ್ರಸಾರ ಮಾಡುವಲ್ಲಿ ರಾಜ್ಯ ಅರಣ್ಯ ಇಲಾಖೆ, ಜಂಟಿ ಅರಣ್ಯ ವ್ಯವಸ್ಥಾಪನಾ ಸಮಿತಿಗಳು (ಅಸ್ತಿತ್ವದಲ್ಲಿದ್ದರೆ), ಗ್ರಾಮೀಣಾಭಿವೃದ್ಧಿ, ಸಮಾಜ ಕಲ್ಯಾಣ ಹಾಗೂ ಐಸಿಡಿಎಸ್ ಮೊದಲಾದವುಗಳ ಕ್ಷೇತ್ರ ಸಿಬ್ಬಂದಿಯನ್ನು ತೊಡಗಿಸಿಕೊಳ್ಳತಕ್ಕದ್ದು.

ಊ) ಸಮಿತಿಯ ಕಾರ್ಯ, ಅದರ ಗುರಿಗಳು, ಧ್ಯೇಯೋದ್ದೇಶಗಳು ಮತ್ತು ಕಾರ್ಯವಿಧಾನಕ್ಕೆ ಸಂಬಂಧಿಸಿದ ಮಾಹಿತಿಯನ್ನು ಗ್ರಾಮದ ವೃತ್ತ, ಎಲ್ಲಾ ಗ್ರಾಮಗಳ ಗ್ರಾಮ ಪಂಚಾಯತಿಯ ಕಛೇರಿ, ಪಂಚಾಯಿತಿ ಸಮಿತಿ, ಅರಣ್ಯ ವಲಯ ಕಛೇರಿ ಮತ್ತು ತಹಸೀಲ್ದಾರರ ಕಛೇರಿ ಹಾಗೂ ಐಸಿಡಿಎಸ್, ಗ್ರಾಮೀಣಾಭಿವೃದ್ಧಿ (ಆರ್‌ಡಿ), ರಾಜ್ಯ ಅರಣ್ಯ ಇಲಾಖೆ, ಆರೋಗ್ಯ ಮತ್ತು ಶಿಕ್ಷಣ ಇಲಾಖೆಗಳಲ್ಲಿ ದೊರೆಯುವಂತೆ ವ್ಯವಸ್ಥೆ ಮಾಡಬೇಕು. ರಾಜ್ಯ ಅರಣ್ಯ ಇಲಾಖೆಯು ದೂರದ ನೆಲಸು ಪ್ರದೇಶಗಳಿಗೆ ಹಾಗೂ ಮೋಜಣಿ ಮಾಡದ ಗ್ರಾಮಗಳಿಗೆ ಮಾಹಿತಿಯನ್ನು ತಿಳಿಸುವಲ್ಲಿ ವಿಶೇಷ ಗಮನವನ್ನು ನೀಡಬೇಕು.

ಋ) ಗ್ರಾಮಸಭಾ ಕಾರ್ಯಕ್ರಮವನ್ನು ಕನಿಷ್ಠ ಪಕ್ಷ ಮೂರು ವಾರಗಳಿಗೆ ಮುಂಚಿತವಾಗಿ ಪ್ರಕಟಿಸಿದ ನಂತರ, ಗ್ರಾಮ ಸಮಿತಿಯು ಕ್ಲೇಮುಗಳಿಗಾಗಿ ಆಹ್ವಾನಿಸುವ ಗ್ರಾಮಸಭಾ ಸಭೆಯನ್ನು ನಡೆಸಬೇಕು.

ಎ) ಕ್ಲೇಮುದಾರರಿಂದ ಪೂರ್ಣವಾಗಿ ಭರ್ತಿ ಮಾಡಿದ ಅರ್ಜಿಯನ್ನು ಸ್ವೀಕರಿಸಿದ ಮೇಲೆ (ಗ್ರಾಮಸಭಾದಲ್ಲಿ), ಅಂತಹ ಅರ್ಜಿ ಸ್ವೀಕರಿಸಿದ ನಂತರ ಎರಡು ವಾರಗಳಿಗೂ ಹೆಚ್ಚು ವಿಳಂಬವಾಗದಂತೆ ನಿರ್ದಿಷ್ಟವಾಗಿ ಈ ಉದ್ದೇಶಕ್ಕಾಗಿಯೇ ಕರೆಯಲಾದ ತರುವಾಯದ ಗ್ರಾಮಸಭಾ ಸಭೆಯಲ್ಲಿ ಜನರ ಸಮಕ್ಷಮದಲ್ಲಿ ಎಲ್ಲಾ ಕ್ಲೇಮುಗಳನ್ನು ಪರಿಶೀಲಿಸಬೇಕು.

ಏ) ಸಾಧ್ಯವಾದಷ್ಟು ಮಟ್ಟಿಗೆ, ಗ್ರಾಮ ಸಭೆಯ ಎಲ್ಲಾ ಸಭೆಗಳನ್ನು ಅವಶ್ಯವಾಗಿ, ಸಾಕಷ್ಟು ಸಂಖ್ಯೆಯಲ್ಲಿ ಗ್ರಾಮಸ್ಥರು ಪಾಲ್ಗೊಳ್ಳಲು ಅನುವಾಗುವಂತೆ ಅಪರಾಹ್ನದ ನಂತರದಲ್ಲಿ ಅಥವಾ ಸಂಜೆಯ ನಂತರದಲ್ಲಿ ನಡೆಸಬೇಕು.

ಐ) ಗ್ರಾಮ ಮಟ್ಟದ ಅಥವಾ ಸ್ಥಳೀಯ ಸಮಿತಿಯಿಂದ ಪರಿಶೀಲಿಸಲ್ಪಟ್ಟ ಮತ್ತು ಅಂಗೀಕರಿಸಲ್ಪಟ್ಟ ಎಲ್ಲಾ ಕ್ಲೇಮುಗಳನ್ನು ಕ್ಷೇತ್ರಮಟ್ಟದ ಪುನರಾವಲೋಕನ ಸಮಿತಿಗೆ ಕಳುಹಿಸಿಕೊಡತಕ್ಕದ್ದು.

ಒ) ಸ್ಥಳೀಯ ಸಮಿತಿಯು ಸಹ ಗ್ರಾಮ ಸಭಾ ಸಭೆಯಲ್ಲಿ ಕ್ಲೇಮುದಾರರಿಗೆ ತನ್ನ ತೀರ್ಮಾನಗಳ ಒಂದು ಪ್ರತಿಯನ್ನು ನೀಡುವುದು.

ಓ) ಕ್ಷೇತ್ರಮಟ್ಟದ ಪುನರಾವಲೋಕನಾ ಸಮಿತಿಯು, ಅಂತಿಮ ಸ್ಥಿರೀಕರಣಕ್ಕಾಗಿ ಅದರ ಶಿಫಾರಸ್ಸುಗಳನ್ನು ಜಿಲ್ಲಾ ಮಟ್ಟದ ಸಮಿತಿಗೆ (ಡಿಎಲ್‌ಸಿ) ಸಲ್ಲಿಸುತ್ತದೆ. ಜಿಲ್ಲಾ ಮಟ್ಟದ ಸಮಿತಿಯು ಸ್ಥಿರೀಕರಣ ಮಾಡುವ ಸಮಯದಲ್ಲಿ ಈ ಕೆಳಕಂಡ ಅಂಶಗಳನ್ನು ಪರಿಗಣನೆಗೆ ತೆಗೆದುಕೊಳ್ಳುತ್ತದೆ.

i) ಬುಡಕಟ್ಟು ಜನಾಂಗಗಳ/ ಅರಣ್ಯವಾಸಿಗಳ ಇರುವಿಕೆಯನ್ನು ಮತ್ತು ಅವರು ಅರಣ್ಯ ಭೂಮಿಗಳ ಅನುಭೋಗದಲ್ಲಿ ಮುಂದುವರೆದಿರುವ ಬಗ್ಗೆ ಖಚಿತಪಡಿಸಿಕೊಳ್ಳಲು ಪ್ರದೇಶದ ಮತದಾರ ಪಟ್ಟಿಗಳು ಸೇರಿದಂತೆ, 1981, 1991 ಮತ್ತು 2001ರ ಜನಗಣತಿ ಅಂಕಿ–ಅಂಶಗಳಲ್ಲಿ ಅವರ ಹೆಸರುಗಳು ಇರುವವೆಂಬುದನ್ನು ಸ್ವತ: ಜಿಲ್ಲಾಮಟ್ಟದ ಸಮಿತಿಯು ಮನದಟ್ಟು ಮಾಡಿಕೊಳ್ಳಬೇಕು.

ii) ಬುಡಕಟ್ಟು ಜನಾಂಗಗಳು ಮತ್ತು ಇತರ ಅರಣ್ಯವಾಸಿಗಳು 1980ಕ್ಕೆ ಮುಂಚಿನಿಂದಲೂ ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿರಬೇಕು ಮತ್ತು ಇಲ್ಲಿಯವರೆಗೆ ಅರಣ್ಯ ಪ್ರದೇಶದ ಅನುಭೋಗದಲ್ಲಿಯೇ ಮುಂದುವರೆದಿರಬೇಕು.

iii) ಕ್ಲೇಮುದಾರನು ಮೊದಲಿನಿಂದ ಕೊನೆಯವರೆಗೂ ವಿವಾದಿತ ಭೂಮಿಯ ಅನುಭೋಗದಲ್ಲಿರದಂತಹ ಯಾವುದೇ ಕ್ಲೇಮನ್ನು ಯಾವ ಸಂದರ್ಭದಲ್ಲಿಯೂ ಸಮಿತಿಯು ಅಂಗೀಕರಿಸತಕ್ಕದ್ದಲ್ಲ.

iv) ಸಮಿತಿಯು ನಿರ್ದಿಷ್ಟ ಅರಣ್ಯ ಪ್ರದೇಶ ಮತ್ತು ಅರಣ್ಯ ಉತ್ಪಾದನೆ ಕುರಿತಂತೆ ನಿರ್ದಿಷ್ಟ ಬುಡಕಟ್ಟು ಜನಾಂಗ ಮತ್ತು ಇತರ ಅರಣ್ಯವಾಸಿಗಳ ಸಾಂಪ್ರದಾಯಿಕ ಮತ್ತು ರೂಢಿಗತ ಹಕ್ಕುಗಳನ್ನು ಪರಿಶೀಲಿಸತಕ್ಕದ್ದು.

v) ಸಮಿತಿಯು ಅಂತಹ ಜನರ ಅನುಭೋಗದಲ್ಲಿರುವ ಅರಣ್ಯ ಪ್ರದೇಶದ ಭೂಬಳಕೆ ಮಾದರಿಯನ್ನು ಪರಿಶೀಲಿಸತಕ್ಕದ್ದು.

vi) ಅಪೀಲುದಾರನಿಗೆ ಮೂರು ವಾರಗಳ ನೋಟೀಸನ್ನು ನೀಡಿದ ನಂತರ, ಎಲ್ಲಾ ಅಪೀಲುಗಳನ್ನು ಸಂದರ್ಭಾನುಸಾರ, ಕ್ಷೇತ್ರಮಟ್ಟದ ಪುನರಾವಲೋಕನಾ ಸಮಿತಿ ಅಥವಾ ಜಿಲ್ಲಾ ಮಟ್ಟದ ಸಮಿತಿಯು ವಿಚಾರಣೆ ಮಾಡುತ್ತದೆ.

**2. ಸ್ಥಳೀಯ/ ಕ್ಷೇತ್ರಮಟ್ಟದ ಸಮಿತಿಗಳ ಮುಂದೆ ಮಂಡಿಸಬೇಕಾದ ಸಾಕ್ಷ್ಯದ ಸ್ವರೂಪ:**

ಅ) ಭೂಸ್ವಾಮ್ಯದ ಅವಧಿಯನ್ನು ನಿರ್ಧರಿಸಲು ಬಳಸಬಹುದಾದಂಥ ಸಾಕ್ಷ್ಯದ(ಗಳ) ಮಾದರಿಯನ್ನು ಸ್ಪಷ್ಟಪಡಿಸುವುದು ಅಗತ್ಯವಾಗಿದೆ. ವಾಸ ಸ್ಥಳದ ಸಾಕ್ಷ್ಯಾಧಾರ (ಪಿ.ಓ.ಆರ್–proof of residence) ಕ್ಲೇಮಿನ ಅಥವಾ ಬೇರೆ ರೀತಿಯ, ಅತ್ಯಾವಶ್ಯಕವಾದ ಸಾಕ್ಷ್ಯ ಅಲ್ಲದಿರುವುದರಿಂದ ಪ್ರಸ್ತುತ ಇರುವ ವಾಸ್ತವಿಕ ಸಂಗತಿಯನ್ನು ನಿರ್ಧಾರ ಮಾಡುವುದು ಅಗತ್ಯವಾಗಿದೆ ಮತ್ತು ಇದು ಅಸ್ತಿತ್ವದಲ್ಲಿರುವ ಕ್ಲೇಮುಗಳ ಸ್ವಾಭಾವಿಕವಾದ ಮತ್ತು ಸಾಂದರ್ಭಿಕವಾದ ಸಾಕ್ಷ್ಯದ(ಗಳ) ಪರಿಶೀಲನೆಯಿಂದ ಸಾಧ್ಯವಾಗುತ್ತದೆ. ಆದ್ದರಿಂದ ವಾಸ್ತವಿಕ ಸಂಗತಿಗಳ ಅರಿವಿರುವ ಒಂದು ಜವಾಬ್ದಾರಿಯುತ ಸ್ಥಳೀಯ ಸಮಿತಿಗೆ, ಅದನ್ನು ಪರಿಶೀಲಿಸುವ ಮತ್ತು ಕ್ಲೇಮುದಾರನ ಸಾಕ್ಷ್ಯವನ್ನು ಮತ್ತು

ಭೂಮಿಯು ಕ್ಲೇಮುದಾರನ ನಿರಂತರ ಅನುಭೋಗದಲ್ಲಿರುವ ಕಾರಣದಿಂದ ನಿರ್ದಿಷ್ಟ ಕಾಲದ ಬಗ್ಗೆ ತಿಳುವಳಿಕೆಯುಳ್ಳ ಇತರ ಗ್ರಾಮಸ್ಥರ ಅಭಿಪ್ರಾಯಗಳನ್ನು ದಾಖಲಿಸಬಲ್ಲ ಅವಕಾಶವನ್ನು ಹೊಂದಿದೆ. ಕ್ಲೇಮುದಾರನಿಗೆ ಸಂದೇಹದ ಲಾಭ ಪಡೆಯುವ ಅವಕಾಶವನ್ನು ನೀಡಬೇಕು.

ಬಿ) ಕ್ಲೇಮಿನ ಅವಧಿಯನ್ನು ಸುಸ್ಥಾಪಿಸುವ ಮೌಖಿಕ ಮತ್ತು/ ಅಥವಾ ದಾಖಲೆಯ, ಎರಡೂ ಬಗೆಯ ವಿವಿಧ ಸಾಕ್ಷ್ಯಗಳನ್ನು ಕ್ಲೇಮಿಗೆ ರುಜುವಾತಾಗಿ ಪರಿಗಣಿಸಬಹುದಾಗಿದೆ. ಆದ್ದರಿಂದ ಸಮಿತಿಯು ಈ ಕೆಳಗಿನವುಗಳನ್ನು ಸಾಕ್ಷ್ಯವಾಗಿ ಅಂಗೀಕರಿಸಬಹುದಾಗಿದೆ.

i) ಯಾವುದೇ ಸರ್ಕಾರ/ಅರೆ ಸರ್ಕಾರದ ಮೂಲದಿಂದ ಪಡೆಯಲಾದ ದಸ್ತಾವೇಜೀಯ ಸಾಕ್ಷ್ಯ.

ii) ಸರ್ವೆ ನಕ್ಷೆಗಳನ್ನು ಒಳಗೊಂಡಂತೆ, ಪ್ರಖ್ಯಾತ ಸಂಸ್ಥೆಯ ಯಾವುದೇ ಮುಂಚಿನ ಸಂಶೋಧನೆ ಅಥವಾ ದಸ್ತಾವೇಜುಗಳ ಸಂಗ್ರಹಣೆ ಮೂಲಕ ಪಡೆಯಲಾದ ದಸ್ತಾವೇಜೀಯ ಸಾಕ್ಷ್ಯ.

iii) ಪಟ್ವಾರಿಯನ್ನೊಳಗೊಂಡಂತೆ ಸಮಿತಿಯ ಮೂರಕ್ಕಿಂತ ಹೆಚ್ಚು ಸದಸ್ಯರು ಮಾಡಬೇಕಾದ ಸ್ಥಳ ಪರಿಶೀಲನೆಯಿಂದ ಸಂಗ್ರಹಿಸಿದ ಸುಸಂಬದ್ಧ ಸಾಕ್ಷ್ಯ.

3. **ಕ್ಲೇಮುಗಳನ್ನು ಅಂಗೀಕರಿಸಲು ಮಾನದಂಡಗಳು:**

ಕ್ಲೇಮನ್ನು ನಿರ್ಧಾರ ಮಾಡುವಾಗ ಗ್ರಾಮ ಮಟ್ಟದ ಸಮಿತಿಯು 1990ರಲ್ಲಿ ಪರಿಸರ ಮತ್ತು ಅರಣ್ಯ ಮಂತ್ರಾಲಯವು ಹೊರಡಿಸಿರುವ ಮಾರ್ಗಸೂಚಿಗಳ ಪರಿಮಿತಿಯಲ್ಲಿ ಈ ಕೆಳಗಿನ ಮಾನದಂಡಗಳಿಗೆ ಗಮನ ಕೊಡತಕ್ಕದ್ದು.

i) ಕ್ಲೇಮುದಾರನು ತನ್ನ ಸಮರ್ಥನೆಯಾಗಿ ಸರ್ಕಾರಿ/ ಅರೆ ಸರ್ಕಾರಿ/ ಇತರ ಸುಸಂಬದ್ಧ ದಾಖಲೆಯ ಸಾಕ್ಷ್ಯಗಳನ್ನು ಹೊಂದಿದ್ದರೆ ಮತ್ತು ಕ್ಲೇಮುದಾರನು 1980ಕ್ಕಿಂತ ಮೊದಲಿನಿಂದ ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿದ್ದರೆ ಮತ್ತು ಅಂದಿನವರೆಗೆ ನಿರಂತರವಾಗಿ ಅರಣ್ಯದ ಅನುಭೋಗದಲ್ಲಿದ್ದರೆ ಆತನ ಎಲ್ಲಾ ಕ್ಲೇಮುಗಳನ್ನು ಅಂಗೀಕರಿಸಬೇಕು.

ii) ಕ್ಲೇಮುದಾರನು ಆಕೆಯ/ಆತನ ಕ್ಲೇಮಿನ ಸಮರ್ಥನೆಯಾಗಿ ದಸ್ತಾವೇಜೀನ ಸಾಕ್ಷ್ಯವನ್ನು ಹೊಂದಿರದಿದ್ದು, ಆದರೆ, ಗ್ರಾಮಸಭೆಯು ಇತರ ಸುಸಂಬದ್ಧ ಸಾಕ್ಷ್ಯದ ಆಧಾರದ ಮೇಲೆ ಕ್ಲೇಮು ನ್ಯಾಯಸಮ್ಮತವಾಗಿದೆ ಎಂದು ಅಭಿಪ್ರಾಯಪಟ್ಟರೆ, ಅಂತಹ ಕ್ಲೇಮುಗಳನ್ನು ಸ್ಥಳೀಯ ಸಮಿತಿಯು ಎಚ್ಚರಿಕೆಯಿಂದ ಪರಿಶೀಲಿಸಬೇಕು ಮತ್ತು ಕ್ಲೇಮುದಾರನಿಗೆ ಸಂದೇಹದ ಲಾಭ ಪಡೆಯುವ ಅವಕಾಶ ನೀಡಬೇಕು. ಸ್ಥಳೀಯ ಸಮಿತಿಯ ತೀರ್ಮಾನವನ್ನು ಸಾಧಾರಣ ಬಹುಮತದಿಂದ ತೆಗೆದುಕೊಳ್ಳತಕ್ಕದ್ದು.

iii) ಕ್ಲೇಮುದಾರನು ಸುಸಂಬದ್ಧ ದಾಖಲೆಯ ಸಾಕ್ಷ್ಯವನ್ನು ಹೊಂದಿರದಿದ್ದರೆ ಮತ್ತು ಗ್ರಾಮ ಸಭೆಯೂ ಸಹ ಆಕೆಯ/ ಆತನ ಕ್ಲೇಮನ್ನು ತಿರಸ್ಕರಿಸಿದರೆ, ಅಂತಹ ಕ್ಲೇಮುಗಳ ಪ್ರಾಮಾಣಿಕತೆಯನ್ನು ಸ್ಥಳೀಯ ಸಮಿತಿಯು ಎಚ್ಚರಿಕೆಯಿಂದ ಪರಿಶೀಲಿಸಬೇಕು ಮತ್ತು ಅಂತಹ ಕ್ಲೇಮುಗಳನ್ನು ನಿರ್ದಿಷ್ಟವಾಗಿ ಪುನರಾವಲೋಕನ ಸಮಿತಿಗೆ ಉಲ್ಲೇಖಿಸಬೇಕು.

iv) ಕ್ಲೇಮುಗಳು ವೈಯಕ್ತಿಕ ತುಂಡು ಭೂಮಿಗೆ ಸಂಬಂಧಪಟ್ಟ ಕ್ಲೇಮುಗಳನ್ನು ಮಾತ್ರವಲ್ಲದೆ, ಸಾಮೂಹಿಕ/ ಸಾಮುದಾಯಿಕ ಒಡತನದ ಕ್ಲೇಮುಗಳನ್ನೂ ಸಹ ಒಳಗೊಳ್ಳಬೇಕು. ಕ್ಲೇಮುಗಳು ಸಾಂಪ್ರದಾಯಿಕ ಬಳಕೆಯ ಮೇಲೆ ಆಧಾರಿತವಾದ ಅರಣ್ಯ ಉತ್ಪನ್ನಗಳ ಮೇಲಿನ ಕ್ಲೇಮುಗಳನ್ನೂ ಸಹ ಒಳಗೊಳ್ಳಬೇಕು. ಕೃಷಿಕರನ್ನು ಮತ್ತು ಮೊದಲಿನಿಂದ ಇದ್ದ ಕೃಷಿ ಸಮುದಾಯಗಳನ್ನು ಸ್ಥಳಾಂತರ ಮಾಡುವ ಕ್ಲೇಮುಗಳನ್ನೂ ಸಹ ಈ ಚೌಕಟ್ಟಿನಲ್ಲಿ ಗಮನಿಸಬೇಕು.

v) ಪರಿಸರ ಮತ್ತು ಅರಣ್ಯ ಮಂತ್ರಾಲಯದ 1990ರ ಮಾರ್ಗಸೂಚಿಯ ವ್ಯಾಪ್ತಿಯೊಳಗೆ ಸ್ಥಿರೀಕರಿಸಿದ ಎಲ್ಲಾ ಕ್ಲೇಮುಗಳನ್ನು ಜಿಲ್ಲಾಮಟ್ಟದ ಸಮಿತಿಯು ರಾಜ್ಯ/ ಕೇಂದ್ರಾಡಳಿತ ಸರ್ಕಾರದ ನೋಡಲ್ ಅಧಿಕಾರಿಗೆ (ಅರಣ್ಯ ಸಂರಕ್ಷಣೆ) ಕಳುಹಿಸತಕ್ಕದ್ದು. ಅದಕ್ಕೆ ಪ್ರತಿಯಾಗಿ ಅವರು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಸೂಕ್ತ ಶಿಫಾರಸ್ಸುಳ್ಳ ಪ್ರಸ್ತಾವವನ್ನು ರಾಜ್ಯ/ ಕೇಂದ್ರಾಡಳಿತ ಸರ್ಕಾರಕ್ಕೆ ಕಳುಹಿಸತಕ್ಕದ್ದು.

vi) ಕ್ಲೇಮುಗಳನ್ನು ನಿರಾಕರಿಸಿದ ಸಂದರ್ಭಗಳಲ್ಲಿ, ಅರಣ್ಯೇತರ ಸರ್ಕಾರಿ ಭೂಮಿಯ ಮೇಲೆ ಹಿಂದೆ ಇದ್ದಂತೆಯೇ ಪುನರ್ ವನನಿರ್ಮಾಣಕ್ಕೆ ಅವಶ್ಯಕ ಕ್ರಮ ತೆಗೆದುಕೊಳ್ಳಬೇಕು.

4. **ತಾಲ್ಲೂಕು ಮಟ್ಟದಲ್ಲಿ ತರಬೇತಿ ಪ್ರಚಾರ ಕಮ್ಮಟ**

i) ಪ್ರಕ್ರಿಯೆಯನ್ನು ತ್ವರಿತಗೊಳಿಸುವ ಮತ್ತು ಅದನ್ನು ಸರಳಗೊಳಿಸುವ ದೃಷ್ಟಿಯಿಂದ ಈ ಮುಂದಿನ ಕಾರ್ಯ ವಿಧಾನವನ್ನು ಅಂಗೀಕರಿಸಬಹುದುಃ

ಪೂರ್ವಯೋಜಿತ ಪ್ರಚಾರವನ್ನು ಮಾಡಬೇಕು. ಪ್ರಚಾರ ಮಾಡಿದ ನಂತರ, ಪರಿಶೀಲನೆಯ ಪ್ರಕ್ರಿಯೆಯನ್ನು ಆರಂಭಿಸುವ ಮುಂಚೆ, ಸರ್ಪಂಚಗಳು, ಉಪಸರ್ಪಂಚಗಳು, ಪಂಚಾಯಿತಿ ಸಮಿತಿ ಮತ್ತು ಜಿಲ್ಲಾ ಪರಿಷತ್ ಸದಸ್ಯರುಗಳು, ಅರಣ್ಯ ಅಧಿಕಾರಿಗಳು ಮತ್ತು ಕಾರ್ಯನಿರ್ವಾಹಕರುಗಳು, ಬುಡಕಟ್ಟು ಕಲ್ಯಾಣ ಅಧಿಕಾರಿಗಳು ಮತ್ತು ಕಾರ್ಯನಿರ್ವಾಹಕರುಗಳು, ಸ್ಥಳೀಯ ನಾಯಕರು, ಹಿರಿಯ ನಾಗರೀಕರು, ಪತ್ರಕರ್ತರು, ಕಂದಾಯ ನೌಕರರು ಮತ್ತು ಕಾರ್ಯನಿರ್ವಾಹಕರುಗಳು, ತಲಾಠಿಗಳು ಮತ್ತು ತಾಲ್ಲೂಕು:ಗ್ರಾಮಮಟ್ಟದ ಸಮಿತಿಗಳ ಸದಸ್ಯರುಗಳಿಗಾಗಿ ತರಬೇತಿಯ ಕಮ್ಮಟಗಳನ್ನು ತಾಲ್ಲೂಕು ಮಟ್ಟದಲ್ಲಿ ತಿಳಿವಳಿಕೆಯುಳ್ಳ ಸರ್ಕಾರೇತರ ಸಂಘಸಂಸ್ಥೆಗಳ ನೆರವಿನೊಂದಿಗೆ ಜಿಲ್ಲಾ ಸಮಿತಿಯು ಏರ್ಪಡಿಸಬೇಕು.

ii) ಎಲ್ಲಾ ನೌಕರರನ್ನು ಈ ಕಮ್ಮಟಕ್ಕೆ ಆಹ್ವಾನಿಸಬೇಕು ಮತ್ತು ಗ್ರಾಮಮಟ್ಟದ ವಿಚಾರಣೆಯ ಕಾರ್ಯವಿಧಾನ ಮತ್ತು ಪ್ರಕ್ರಿಯೆಯ ಮಾಹಿತಿಯನ್ನು ನೀಡಬೇಕು.

iii) ಸರ್ಕಾರೇತರ ಸಂಘಸಂಸ್ಥೆಗಳು ಸಿಬಿಓಗಳು, ಕ್ರಿಯಾವಾದಿಗಳು ಮತ್ತು ಪತ್ರಕರ್ತರಿಗೆ ಪ್ರತ್ಯೇಕ ಸಭೆಯನ್ನು ನಡೆಸಬೇಕು.

iv) ಕಾರ್ಯಕ್ರಮಗಳನ್ನು ರೂಪಿಸಿ ಪ್ರಕಟಿಸಿದ ನಂತರ ಗ್ರಾಮ ಸಭೆಯ ಸಭೆಗಳನ್ನು ನಡೆಸಬೇಕು.

5. **ಇತರ ವಿಷಯಗಳು**

i) ರಾಜ್ಯ ಮಟ್ಟದ ಕಾರ್ಯಪಡೆಯು ಮೇಲೆ ಹೇಳಿದ ಮಾರ್ಗಸೂಚಿಗಳ ಅಡಿಯಲ್ಲಿ ಬುಡಕಟ್ಟು ಜನಾಂಗವನ್ನು ಒಳಗೊಂಡಂತೆ, ಅರಣ್ಯವಾಸಿಗಳ ಕ್ಲೇಮುಗಳ ಪರಿಶೀಲನೆಯ ಕಾರ್ಯಪ್ರಗತಿಯ ಮೇಲ್ವಿಚಾರಣೆಯನ್ನು ನಡೆಸುವುದು.

ii) ಈ ಇಡೀ ಪ್ರಕ್ರಿಯೆಯು ಒಂದು ವರ್ಷದ ಅವಧಿಯೊಳಗೆ ಪೂರ್ಣಗೊಳ್ಳಬಹುದು.

**ಎಸ್.ಆರ್. ವತ್ಸಲ**

ಪಿ.ಆರ್. 374 ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:-** ಶ್ರೀ ಹೆಚ್. ಯಮನೂರಪ್ಪ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಯಾಂತ್ರಿಕ ಉಪ ವಿಭಾಗ, ಬಳ್ಳಾರಿ ಇವರ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ- ಆದೇಶ.

**ಓದಲಾಗಿದೆ:** 1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಾಗಲಕೋಟೆ ಇವರ ಪತ್ರ ಸಂಖ್ಯೆ ಸಂ.ಜಿಪಂಬಾ:ಅ: ಇಂ:ಸಿಬ್ಬಂದಿ:ಸಿಆರ್:29:2004-05: ದಿನಾಂಕ: 24-2-2005

2) ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ :17 :ಇಎನ್‌ಕ್ಯೂ :05. ದಿನಾಂಕ. 16-5-2005.

3) ಶ್ರೀ ಹೆಚ್. ಯಮನೂರಪ್ಪ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ಮನವಿ ದಿನಾಂಕ. 26.9.2005 ಮತ್ತು 10.11.2005.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಾಗಲಕೋಟೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ.(1) ರ ಪತ್ರದಲ್ಲಿ ಶ್ರೀ ಹೆಚ್. ಯಮನೂರಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ , ಮುಧೋಳ್ ಇವರು ಅಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕಾಮಗಾರಿಗಳಿಗೆ ಬಿಡುಗಡೆ ಮಾಡಲಾದ ಮೊತ್ತಕ್ಕೆ ಮಾಸಿಕ ಲೆಕ್ಕಪತ್ರಗಳ ವೋಚರ್‌ಗಳನ್ನು ಸಲ್ಲಿಸದೇ ಇರುವುದರಿಂದ ಕಾಮಗಾರಿಗಳಿಗೆ ಭರಿಸಿದ ವೆಚ್ಚವನ್ನು ಹಿಂದಕ್ಕೆ ಪಡೆದು ಅವರ ವೈಯಕ್ತಿಕ ಹೆಸರಿನಲ್ಲಿ ಎಂ.ಪಿ.ಡಬ್ಲ್ಯೂ. ಖಾತೆಗೆ 32,83,792-00 ಗಳನ್ನು ಖರ್ಚು ಹಾಕಲಾಗಿದ್ದು , ಇವರು ಈ ಮೊತ್ತದಲ್ಲಿ ರೂ. 30,11,071-00 ಗಳಿಗೆ ಮಾತ್ರ ವೋಚರ್ ಸಲ್ಲಿಸಿದ್ದು , ಇನ್ನುಳಿದ ರೂ. 2,72,721-00 ಗಳ ವೋಚರ್ ಸಲ್ಲಿಸಿರುವುದಿಲ್ಲವೆಂಬ ಕಾರಣಕ್ಕಾಗಿ ಶ್ರೀ ಹೆಚ್. ಯಮನೂರಪ್ಪ, ಹಾಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಯಾಂತ್ರಿಕ ಉಪ ವಿಭಾಗ, ಬಳ್ಳಾರಿ ಇವರು ತಮ್ಮ ಕರ್ತವ್ಯದಲ್ಲಿ ತೀವ್ರ ದುರ್ನಡತೆ ಹಾಗೂ ಸರ್ಕಾರಿ ಬೊಕ್ಕಸಕ್ಕೆ ನಷ್ಟವೆಸಗಿದ್ದಾರೆಂಬುದು ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ.(2) ರ ದಿ.16-5-2005 ರಲ್ಲಿ ಇವರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು, ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿರಿಸಲಾಗಿತ್ತು.

ಶ್ರೀ ಹೆಚ್. ಯಮನೂರಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ. (3) ರಲ್ಲಿ ಸರ್ಕಾರಕ್ಕೆ ಮನವಿ ಸಲ್ಲಿಸಿ, ಶ್ರೀ ಆರ್.ಎಸ್.ಪುರೋಹಿತ, ಅಂದಿನ ಕಿರಿಯ ಇಂಜಿನಿಯರ್ ಇವರು ದಿ. 21-9-2005 ರಂದು ರೂ. 2,72,721-00 ಗಳ ಮೊತ್ತದ ಮಾಸಿಕ ಲೆಕ್ಕ ಪತ್ರಗಳ ಎಲ್ಲಾ ವೋಚರ್‌ಗಳನ್ನು ವಿಭಾಗ ಕಛೇರಿಗೆ ಸಲ್ಲಿಸಿರುವುದಾಗಿ ತಿಳಿಸಿ ಹಾಗೂ ಇವರನ್ನು ಅಮಾನತ್ತುಗೊಳಿಸಿ ಆರು ತಿಂಗಳುಗಳಿಗಿಂತ ಮೇಲಾಗಿರುವುದರಿಂದ ಅಮಾನತ್ತುಗೊಳಿಸಿರುವ ಆದೇಶವನ್ನು ರದ್ದುಗೊಳಿಸಿ ಸೇವೆಯಲ್ಲಿ ಪುನರ್ ಸ್ಥಾಪಿಸಲು ಕೋರಿರುತ್ತಾರೆ.

ಸರ್ಕಾರವು ಸದರಿ ಅಧಿಕಾರಿಯವರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಇವರು ಅಮಾನತ್ತುಗೊಂಡು ಈಗಾಗಲೇ ಆರು ತಿಂಗಳಿಗಿಂತ ಮೇಲ್ಪಟ್ಟಿರುವುದರಿಂದ ಮತ್ತು ರೂ. 2,72,721-00 ಗಳ ಮೊತ್ತದ ಮಾಸಿಕ ಲೆಕ್ಕ ಪತ್ರಗಳ ಎಲ್ಲಾ ವೋಚರ್‌ಗಳನ್ನು ವಿಭಾಗ ಕಛೇರಿಗೆ ಸಲ್ಲಿಸಿರುವುದಾಗಿ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬಾಗಲಕೋಟೆ ಇವರು ದಿ. 30-9-2005 ರಂದು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಾಗಲಕೋಟೆ ಇವರಿಗೆ ಬರೆದಿರುವ ಪತ್ರದಲ್ಲಿ ತಿಳಿಸಿರುವುದರಿಂದ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರ ಅಮಾನತ್ತನ್ನು ತೆರವುಗೊಳಿಸಲು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 17 ಇಎನ್‌ಕ್ಯೂ 05, ಬೆಂಗಳೂರು, ದಿನಾಂಕ. 18ನೇ ಜನವರಿ 2006.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) 1957 ರ ನಿಯಮ -10ನೇ ನಿಯಮದ (5) ನೇ ಉಪ ನಿಯಮ (ಸಿ) ಪ್ರಕಾರ ಶ್ರೀ ಹೆಚ್. ಯಮನೂರಪ್ಪ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಯಾಂತ್ರಿಕ ಉಪ ವಿಭಾಗ, ಬಳ್ಳಾರಿ ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಮುಧೋಳ, ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿ ಹಾಗೂ ಸೇವೆಯಲ್ಲಿ ಪುನರ್ ಸ್ಥಾಪಿಸಿ, ಇವರನ್ನು ಯಾಂತ್ರಿಕ ಉಪ ವಿಭಾಗ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬಳ್ಳಾರಿ, ಇಲ್ಲಿಯೇ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ,**

ಪಿ.ಆರ್. 207

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ವಿಷಯ**:- ಕೊಪ್ಪಳ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ಹಾಗೂ ಅದರ ನಾಲ್ಕು ಉಪ ವಿಭಾಗಗಳ ಉಗ್ರಾಣ ದಾಸ್ತಾನಿನ ಕೊರತೆಗೆ ಸಂಬಂಧಿಸಿದ ಅಧಿಕಾರಿ / ನೌಕರರುಗಳ ಮೇಲಿನ ಆರೋಪಗಳ ಬಗ್ಗೆ ವಿವರವಾದ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸುವ ಬಗ್ಗೆ - ಆದೇಶ.

**ಓದಲಾಗಿದೆ:-**

1. ಮುಖ್ಯಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರ ಪತ್ರ ಸಂ:ಜಿಪಂಕೊ/ ಸಿಸಿಎ/10/04-05 / ದಿ.8-10-2004
2. ಸಾದ ಕಾರಣ ಕೇಳುವ ನೋಟೀಸ್ ಸಂಖ್ಯೆ. ಗ್ರಾಅಪ:38:ಇಎನ್‌ಕ್ಯೂ:04, ದಿ.27-11-04
3. ಆಪಾದಿತ ಅಧಿಕಾರಿ / ನೌಕರರುಗಳು ಸಲ್ಲಿಸಿದ ಲಿಖಿತ ಉತ್ತರಗಳ ದಿ. 15-1-05 (ಪುಟ-425)
4. ಮುಖ್ಯಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರ ಪತ್ರ ಸಂ:ಜಿಪಂಕೊ/ ಸಿಸಿಎ/10/04-05 / ದಿ. 24-9-05
5. ಕಾರಣ ಕೇಳುವ ನೋಟೀಸ್ ಸಂಖ್ಯೆ. ಗ್ರಾಅಪ:38:ಇಎನ್‌ಕ್ಯೂ:04, ದಿ. 28-10-05
6. ಆಪಾದಿತ ಅಧಿಕಾರಿ / ನೌಕರರುಗಳು ವಿವಿಧ ದಿನಾಂಕಗಳಲ್ಲಿ ಸಲ್ಲಿಸಿದ ಲಿಖಿತ ಉತ್ತರಗಳು

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ. 8-10-2004 ರಲ್ಲಿ ಕೊಪ್ಪಳ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ಹಾಗೂ ಅದರ ನಾಲ್ಕು ಉಪ ವಿಭಾಗಗಳಲ್ಲಿ ದಿ. 1-6-87 ರಿಂದ 31-3-2002 ರವರೆಗಿನ ಅವಧಿಯಲ್ಲಿ ಉಗ್ರಾಣ ದಾಸ್ತಾನಿನಲ್ಲಿ ನಡೆದಿರುವ ಉಗ್ರಾಣ ಸಾಮಗ್ರಿಗಳ ಕೊರತೆಯಿಂದಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಲು ಕಾರಣರಾಗಿರುವ ಈ ಕೆಳಕಂಡ ಅಧಿಕಾರಿ / ನೌಕರರುಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ದೋಷಾರೋಪಣಾ ಪಟ್ಟಿ 1 ರಿಂದ 4 ನ್ನು ಮತ್ತು ಇದಕ್ಕೆ ಸಂಬಂಧಿಸಿದ ದಾಖಲೆಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು.

**ಶ್ರೀಯುತರಾದ (ನಿವೃತ್ತಿ ಹೊಂದಿರುವ ಅಧಿಕಾರಿಗಳು)**

1) ಎಸ್.ಎನ್.ಹುಸೇನಿ, ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ
2) ಹೆಚ್.ಜಿ.ರಾಮಯ್ಯ, ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ
3) ಎಸ್.ತಿಮ್ಮಪ್ಪ, ಅಂದಿನ ಸಕಾಇಂ, ಜಿಪಂಇಂಉವಿ, ಕುಷ್ಟಗಿ
4) ಹೆಚ್.ಎಸ್.ಸೋಮರೆಡ್ಡಿ, ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ
3) ಎಸ್.ಎ.ಸಜ್ಜನರ, ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ
4) ಗೌಸ್ ಮೊಹಿನುದ್ದೀನ್, ಅಂದಿನ ಲೆಕ್ಕ ಅಧೀಕ್ಷಕರು ,

**ಶ್ರೀಯುತರಾದ ಸೇವೆಯಲ್ಲಿರುವ ಅಧಿಕಾರಿ / ನೌಕರರು**

1. ಕೆ.ಎನ್.ಚಂದ್ರಶೇಖರ್, ಅಂದಿನ ಲೆಕ್ಕಾಧೀಕ್ಷಕರು, ಜಿಪಂಇಂವಿ, ಕೊಪ್ಪಳ (ಪ್ರಸ್ತುತ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು)
2. ದೇವೇಂದ್ರಪ್ಪ ದೇಸಾಯಿ, ಅಂದಿನ ಪ್ರಭಾರಿ ಲೆಕ್ಕಾಧೀಕ್ಷಕರು, (ಪ್ರಸ್ತುತ ಜಿಪಂಇಂವಿ, ಕೊಪ್ಪಳದಲ್ಲಿ ಪ್ರದಸ)

3. ಎಂ.ಪಂಪಾಪತಿ , ಅಂದಿನ ಸಕಾಇಂ, ಜಿಪಂಇಂಉವಿ, ಕುಷ್ಟಗಿ
(ಪ್ರಸ್ತುತ ಜಿಪಂಇಂಉವಿ, ಸಿಂಧನೂರು)
4. ಬಿ.ವಿ.ಬಳಲೂರ, ಅಂದಿನ ಉಗ್ರಾಣಪಾಲಕರು, ಜಿಪಂಇಂವಿ, ಕೊಪ್ಪಳ
(ಪ್ರಸ್ತುತ ಜಿಎಲ್ ಬಿಸಿ-ಉವಿ, ಕಾತರಕಿ, ಮುಧೋಳ ತಾ.)
5. ಈಶ್ವರ ಹತ್ತಿ, ಅಂದಿನ ಉಗ್ರಾಣಪಾಲಕರು, ಜಿಪಂಇಂವಿ, ಕೊಪ್ಪಳ
(ಪ್ರಸ್ತುತ ಜಿಪಂಇಂವಿ, ಗದಗ್)
6. ಬಿ.ವಿ.ಹಿತ್ತಲಮನಿ, ಅಂದಿನ ದ್ವಿದಸ
(ಪ್ರಸ್ತುತ ಜಿಪಂಇಂಉವಿ, ಕೊಪ್ಪಳದಲ್ಲಿ ಪ್ರದಸ)
7. ವಿ.ಜಿ.ಕೊಳ್ಳಪ್ಪನವರ ಅಂದಿನ ದ್ವಿದಸ
(ಪ್ರಸ್ತುತ ಜಿಪಂಇಂವಿ, ಯಲಬುರ್ಗ )
8. ತಿರುಮಲರಾವ್ , ಅಂದಿನ ದ್ವಿದಸ, ಜಿಪಂಇಂವಿ, ಕೊಪ್ಪಳ.
9. ಎಂ.ಹೆಚ್.ಜಾಗೀರದಾರ್, ಅಂದಿನ ಉಗ್ರಾಣ ಸಹಾಯಕರು,
(ಪ್ರಸ್ತುತ ಕಂದಾಯ ಇಲಾಖೆ, ಯಲಬುರ್ಗದ ಬೆಳಕಲ್ ಗ್ರಾಮದಲ್ಲಿ ಗ್ರಾಮ ಲೆಕ್ಕಿಗ)
10. ಮಾರ್ಟಿನ್, ಅಂದಿನ ಉಗ್ರಾಣಸಹಾಯಕರು,
(ಪ್ರಸ್ತುತ ಜಿಪಂಇಂಉವಿ, ಗಂಗಾವತಿ)
11. ವಲಿಬಾ, ಅಂದಿನ ಉಗ್ರಾಣಸಹಾಯಕರು,
(ಪ್ರಸ್ತುತ ಜಿಪಂಇಂಉವಿ, ಕೊಪ್ಪಳ)

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಅವರ ಮೇಲಿನ ಆರೋಪಗಳ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ದಿ. 27-11-04 ರಲ್ಲಿ ಮೊದಲು ಸಾದಾ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ, ಅವರುಗಳಿಂದ ಸ್ವೀಕೃತಿ ಪಡೆದು ಸಲ್ಲಿಸುವಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರಿಗೆ ತಿಳಿಸಲಾಗಿತ್ತು. ಅದರಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರು ಸದರಿ ಅಧಿಕಾರಿ / ನೌಕರರುಗಳಿಗೆ ಜಾರಿ ಮಾಡಿದ ಸಾದಾ ಕಾರಣ ಕೇಳುವ ನೋಟೀಸಿಗೆ ಅವರುಗಳು ನೀಡಿದ ಲಿಖಿತ ಉತ್ತರಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ದಿ. 15-1-05 ರಲ್ಲಿ ಸಲ್ಲಿಸಿದ್ದರು. ಸದರಿ ಲಿಖಿತ ಹೇಳಿಕೆಗಳನ್ನು ಕೂಲಂಕುಶವಾಗಿ ಪರಿಶೀಲಿಸಿ ಸದರಿ ಉಗ್ರಾಣ ಸಾಮಗ್ರಿಗಳ ಕೊರತೆಗೆ ಸಂಬಂಧಿಸಿದಂತೆ ಸದರಿ ಇಂಜಿನಿಯರಿಂಗ್ ವಿಭಾಗದಲ್ಲಿನ ಮೂಲ ದಾಖಲಾತಿಗಳೊಂದಿಗೆ ಪರಿಶೀಲಿಸಿ, ಮೇಲ್ನೋಟಕ್ಕೆ ಅವ್ಯವಹಾರವೆಸಗಿರುವುದು ಕಂಡುಬಂದಲ್ಲಿ ಅಂತಹವರ ವಿರುದ್ಧ ತಕ್ಷಣ ಶಿಸ್ತು ಕ್ರಮ ಕೈಗೊಳ್ಳಲು ಆರೋಪ ಪಟ್ಟಿಯೊಂದಿಗೆ ಮೂಲ ದಾಖಲೆಗಳೊಂದಿಗೆ ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಕೋರಲಾಗಿತ್ತು. ಈ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ದಿ. 24-9-05 ರಲ್ಲಿ ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸಿ, ಶ್ರೀ ಬಿ.ವೈ.ಮಾದನೂರು, ಅಂದಿನ ಲೆಕ್ಕಾಧೀಕ್ಷಕರು, ಪಂರಾಇಂ ವಿಭಾಗ, ಕೊಪ್ಪಳ ಇವರು ಸಹ ಕಾರಣರಾಗಿರುತ್ತಾರೆಂದು ಇವರ ವಿರುದ್ಧ ಸಹ ಶಿಸ್ತು ಕ್ರಮ ಕೈಗೊಳ್ಳಲು ಕೋರಿದ್ದರು.

ಸದರಿ ಪ್ರಸ್ತಾವನೆಯನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ,1) ಶ್ರೀಎಸ್.ಎನ್.ಹುಸೇನಿ, ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ , 2) ಶ್ರೀ ಹೆಚ್.ಜಿ.ರಾಮಯ್ಯ, ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ, 3) ಶ್ರೀ ಎಸ್.ತಿಮ್ಮಪ್ಪ, ಅಂದಿನ ಸಕಾಇಂ, ಜಿಪಂಇಂಉವಿ, ಕುಷ್ಟಗಿ, 4) ಶ್ರೀ ಹೆಚ್.ಎಸ್. ಸೋಮರೆಡ್ಡಿ, ಅಂದಿನ ಸಕಾಇಂ, ಜಿಪಂಇಂಉವಿ, ಕೊಪ್ಪಳ, ಮತ್ತು 5) ಶ್ರೀ ಗೌಸ್ ಮೊಹಿನುದ್ದೀನ್, ಅಂದಿನ ಲೆಕ್ಕ ಅಧೀಕ್ಷಕರು ಈ ಅಧಿಕಾರಿ / ನೌಕರರು ಸೇವೆಯಿಂದ ನಿವೃತ್ತರಾಗಿರುವುದರಿಂದ ಮತ್ತು ಶ್ರೀ ಎಸ್.ಎ.ಸಜ್ಜನರ , ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಕೊಪ್ಪಳ ಇವರು ಈಗಾಗಲೇ ನಿಧನರಾಗಿರುವುದರಿಂದ ಇವರನ್ನು ಹೊರತುಪಡಿಸಿ , ಸೇವೆಯಲ್ಲಿರುವ ಈ ಕೆಳಕಂಡ ಅಧಿಕಾರಿ / ನೌಕರರ ಮೇಲೆ ನಿಯಮಾನುಸಾರ ಶಿಸ್ತು ಕ್ರಮ ಕೈಗೊಳ್ಳಲು ಕ.ಸ.ಸೇ (ವ.ನಿ.ಅ.) ನಿಯಮ 1957ರ ನಿಯಮ 11 ರನ್ವಯ ಇವರುಗಳಿಗೆ ಇಲಾಖಾ ವಿಚಾರಣೆ ಹೂಡಿ ಮೇಲೆ ಓದಲಾದ ಕ್ರಮ ಸಂ. (5) ರ ದಿ. 28-10-05 ರಲ್ಲಿ ಕಾರಣ ಕೇಳುವ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿಮಾಡಲಾಗಿತ್ತು.

**ಶ್ರೀಯುತರಾದ ಸೇವೆಯಲ್ಲಿರುವ ಅಧಿಕಾರಿ / ನೌಕರರು**

1. ಕೆ.ಎನ್.ಚಂದ್ರಶೇಖರ್, ಅಂದಿನ ಲೆಕ್ಕಾಧೀಕ್ಷಕರು, ಜಿಪಂಇಂವಿ, ಕೊಪ್ಪಳ
(ಪ್ರಸ್ತುತ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು)
2. ದೇವೇಂದ್ರಪ್ಪ ದೇಸಾಯಿ, ಅಂದಿನ ಪ್ರಭಾರಿ ಲೆಕ್ಕಾಧೀಕ್ಷಕರು,
(ಪ್ರಸ್ತುತ ಜಿಪಂಇಂವಿ, ಕೊಪ್ಪಳದಲ್ಲಿ ಪ್ರದಸ)

3. ಎಂ.ಪಂಪಾಪತಿ , ಅಂದಿನ ಸಕಾಇಂ, ಜಿಪಂಇಂಉವಿ, ಕುಷ್ಟಗಿ
(ಪ್ರಸ್ತುತ ಜಿಪಂಇಂಉವಿ, ಸಿಂಧನೂರು)
4. ಬಿ.ವಿ.ಬಳಲೂರ, ಅಂದಿನ ಉಗ್ರಾಣಪಾಲಕರು, ಜಿಪಂಇಂವಿ, ಕೊಪ್ಪಳ
(ಪ್ರಸ್ತುತ ಜಿಎಲ್ ಬಿಸಿ-ಉವಿ, ಕಾತರಕಿ, ಮುಧೋಳ ತಾ.)
5. ಈಶ್ವರ ಹತ್ತಿ, ಅಂದಿನ ಉಗ್ರಾಣಪಾಲಕರು, ಜಿಪಂಇಂವಿ, ಕೊಪ್ಪಳ
(ಪ್ರಸ್ತುತ ಜಿಪಂಇಂವಿ, ಗದಗ್)
6. ಬಿ.ವಿ.ಹಿತ್ತಲಮನಿ, ಅಂದಿನ ದ್ವಿದಸ
(ಪ್ರಸ್ತುತ ಜಿಪಂಇಂಉವಿ, ಕೊಪ್ಪಳದಲ್ಲಿ ಪ್ರದಸ)
7. ವಿ.ಜಿ.ಕೊಳ್ಳಪ್ಪನವರ ಅಂದಿನ ದ್ವಿದಸ
(ಪ್ರಸ್ತುತ ಜಿಪಂಇಂವಿ, ಯಲಬುರ್ಗ )
8. ತಿರುಮಲರಾವ್ , ಅಂದಿನ ದ್ವಿದಸ, ಜಿಪಂಇಂವಿ, ಕೊಪ್ಪಳ.
9. ಎಂ.ಹೆಚ್.ಜಾಗೀರದಾರ್, ಅಂದಿನ ಉಗ್ರಾಣ ಸಹಾಯಕರು,
(ಪ್ರಸ್ತುತ ಕಂದಾಯ ಇಲಾಖೆ, ಯಲಬುರ್ಗದ ಬೆಳಕಲ್ ಗ್ರಾಮದಲ್ಲಿ ಗ್ರಾಮ ಲೆಕ್ಕಿಗ)
10. ಮಾರ್ಟಿನ್, ಅಂದಿನ ಉಗ್ರಾಣಸಹಾಯಕರು,
(ಪ್ರಸ್ತುತ ಜಿಪಂಇಂಉವಿ, ಗಂಗಾವತಿ)
11. ವಲಿಬಾ, ಅಂದಿನ ಉಗ್ರಾಣಸಹಾಯಕರು,
(ಪ್ರಸ್ತುತ ಜಿಪಂಇಂಉವಿ, ಕೊಪ್ಪಳ)
12. ಬಿ.ವೈ. ಮಾದಿನೂರು, ಅಂದಿನ ಲೆಕ್ಕಾಧೀಕ್ಷಕರು, ಜಿಪಂಇಂವಿ, ಕೊಪ್ಪಳ.

ಸದರಿ ಕಾರಣ ಕೇಳುವ ನೋಟೀಸಿಗೆ ಮೇಲೆ ಓದಲಾದ ಕ್ರಮ ಸಂ.(6) ರಲ್ಲಿ ಸದರಿ ಅಧಿಕಾರಿ / ನೌಕರರು ಲಿಖಿತ ಉತ್ತರವನ್ನು ಸಲ್ಲಿಸಿ , ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿದ್ದಾರೆ. ಆದರೆ, ಶ್ರೀ ಕೆ.ಎಸ್. ಚಂದ್ರಶೇಖರ್, ಅಂದಿನ ಲೆಕ್ಕಾಧೀಕ್ಷಕರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ , ಕೊಪ್ಪಳ ಇವರು ಇಂದಿನವರೆವಿಗೂ ತಮ್ಮ ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲ. ಕಾರಣ ಕೇಳುವ ನೋಟೀಸಿನಲ್ಲಿ ಇವರಿಗೆ ನೀಡಿರುವ ಗಡುವು ಈಗಾಗಲೇ ಮುಗಿದಿರುತ್ತದೆ. ಆದ್ದರಿಂದ ಲಿಖಿತ ಉತ್ತರ ಸಲ್ಲಿಸಿರುವ ಹೇಳಿಕೆಗಳನ್ನು ಪರಿಶೀಲಿಸಲಾಗಿ ಅವು ಸಮರ್ಪಕವಾಗಿಲ್ಲವೆಂದು ಕಂಡು ಬಂದಿರುವುದರಿಂದ ಮತ್ತು ಆಪಾದಿತರು ಆರೋಪಿತ ದುರ್ನಡತೆಯನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬರುವುದರಿಂದ ಆಪಾದಿತರ ಮೇಲಿನ ಆಪಾದನೆಗಳ ಬಗ್ಗೆ ಸತ್ಯಾಂಶಗಳನ್ನು ಅರಿಯಲು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 38 ಇಎನ್‌ಕ್ಯೂ 04, ಬೆಂಗಳೂರು, ದಿನಾಂಕ . 15ನೇ ಫೆಬ್ರವರಿ 2006.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಸೇವೆಯಲ್ಲಿರುವ ಅಧಿಕಾರಿ/ ನೌಕರರುಗಳ ಮೇಲಿನ ಆಪಾದನೆಗಳ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಲ್ಲಿ ನಿಗದಿಪಡಿಸಲಾದ ವಿಧಿವಿಧಾನಗಳನ್ನು ಅನುಸರಿಸಿ ನಿಯಮ 13 ರನ್ವಯ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿಯಮ 11(2)ರ ರೀತ್ಯ ಶ್ರೀ ಎಸ್.ವಿ.ಪಾಟೀಲ್, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, 5/A, ಮೊದಲನೇ ಮುಖ್ಯ ರಸ್ತೆ, 11ನೇ ಅಡ್ಡ ರಸ್ತೆ, ಎಸ್.ಜಿ.ಎಫ್. ಲೇಔಟ್, ನೃಪತುಂಗ ನಗರ, 2ನೇ ಹಂತ, ನಾಗರಬಾವಿ, ಬೆಂಗಳೂರು-72 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11(5)ರ ರೀತ್ಯ ಸಹಾಯಕ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಕೊಪ್ಪಳ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಿದೆ.

**ಶ್ರೀಯುತರಾದ ಸೇವೆಯಲ್ಲಿರುವ ಅಧಿಕಾರಿ / ನೌಕರರು**

1. ಕೆ.ಎಸ್.ಚಂದ್ರಶೇಖರ್, ಅಂದಿನ ಲೆಕ್ಕಾಧೀಕ್ಷಕರು, ಜಿಪಂಇಂವಿ, ಕೊಪ್ಪಳ
(ಪ್ರಸ್ತುತ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು)
2. ದೇವೇಂದ್ರಪ್ಪ ದೇಸಾಯಿ, ಅಂದಿನ ಪ್ರಭಾರಿ ಲೆಕ್ಕಾಧೀಕ್ಷಕರು,
(ಪ್ರಸ್ತುತ ಜಿಪಂಇಂವಿ, ಕೊಪ್ಪಳದಲ್ಲಿ ಪ್ರದಸ)
3. ಎಂ.ಪಂಪಾಪತಿ , ಅಂದಿನ ಸಕಾಇಂ, ಜಿಪಂಇಂಉವಿ, ಕುಷ್ಟಗಿ
(ಪ್ರಸ್ತುತ ಜಿಪಂಇಂಉವಿ, ಸಿಂಧನೂರು)
4. ಬಿ.ವಿ.ಬಳಲೂರ, ಅಂದಿನ ಉಗ್ರಾಣಪಾಲಕರು, ಜಿಪಂಇಂವಿ, ಕೊಪ್ಪಳ
(ಪ್ರಸ್ತುತ ಜಿಎಲ್ ಬಿಸಿ-ಉವಿ, ಕಾತರಕಿ, ಮುಧೋಳ ತಾ.)

5. ಈಶ್ವರ ಹತ್ತಿ, ಅಂದಿನ ಉಗ್ರಾಣಪಾಲಕರು, ಜಿಪಂಇಂವಿ, ಕೊಪ್ಪಳ
(ಪ್ರಸ್ತುತ ಜಿಪಂಇಂವಿ, ಗದಗ್)
6. ಬಿ.ವಿ.ಹಿತ್ತಲಮನಿ, ಅಂದಿನ ದ್ವಿದಸ
(ಪ್ರಸ್ತುತ ಜಿಪಂಇಂಉವಿ, ಕೊಪ್ಪಳದಲ್ಲಿ ಪ್ರದಸ)
7. ವಿ.ಜಿ.ಕೊಳ್ಳಪ್ಪನವರ ಅಂದಿನ ದ್ವಿದಸ
(ಪ್ರಸ್ತುತ ಜಿಪಂಇಂವಿ, ಯಲಬುರ್ಗ )
8. ತಿರುಮಲರಾವ್ , ಅಂದಿನ ದ್ವಿದಸ, ಜಿಪಂಇಂವಿ, ಕೊಪ್ಪಳ.
9. ಎಂ.ಹೆಚ್.ಜಾಗೀರದಾರ್, ಅಂದಿನ ಉಗ್ರಾಣ ಸಹಾಯಕರು,
(ಪ್ರಸ್ತುತ ಕಂದಾಯ ಇಲಾಖೆ, ಯಲಬುರ್ಗದ ಬೆಳಕಲ್ ಗ್ರಾಮದಲ್ಲಿ ಗ್ರಾಮ ಲೆಕ್ಕಿಗ)
10. ಮಾರ್ಟಿನ್, ಅಂದಿನ ಉಗ್ರಾಣಸಹಾಯಕರು,
(ಪ್ರಸ್ತುತ ಜಿಪಂಇಂಉವಿ, ಗಂಗಾವತಿ)
11. ವಲಿಬಾ, ಅಂದಿನ ಉಗ್ರಾಣಸಹಾಯಕರು,
(ಪ್ರಸ್ತುತ ಜಿಪಂಇಂಉವಿ, ಕೊಪ್ಪಳ)
12. ಬಿ.ವೈ. ಮಾದಿನೂರು, ಅಂದಿನ ಲೆಕ್ಕಾಧೀಕ್ಷಕರು, ಜಿಪಂಇಂವಿ, ಕೊಪ್ಪಳ.

ಈ ವಿಚಾರಣೆಯನ್ನು 3 ತಿಂಗಳೊಳಗಾಗಿ ನಡೆಸಿ, ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ನಿಯಮಾನುಸಾರ ನಿಗದಿತ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ.ಸುಂದರ,**

ಪಿ.ಆರ್. 302

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ವಿಷಯ:** ಶ್ರೀ ಗೋಪಾಲ ಕೃಷ್ಣ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ದೇವದುರ್ಗ ಇವರ ಅಮಾನತ್ತು ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ರಾಯಚೂರು ಇವರ ಪತ್ರ ಸಂ. ಜಿಪರಾ/ಸಿಸಿಎ/18/2004-05/3970, ದಿ. 29-10-05.

**ಪ್ರಸ್ತಾವನೆ**

ಶ್ರೀ ಗೋಪಾಲಕೃಷ್ಣ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ದೇವದುರ್ಗ ಇವರು ಜಲ ನಿರ್ಮಲ ಯೋಜನೆಯಡಿಯಲ್ಲಿ ಕೈಗೆತ್ತಿಕೊಳ್ಳಲಾದ ಅಂರ್ತಜಲ ಪುನಶ್ಚೇತನ ಗುಣಮಟ್ಟ ಕುರಿತು ಜಂಟಿಯಾಗಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ ಮತ್ತು ಸ್ಟೆಮ ನೆರವು ಸಂಸ್ಥೆಯವರು ದೇವದುರ್ಗ ತಾಲ್ಲೂಕಿನ ಜೆ.ಜಾಡಲದಿನ್ನಿ ಪಂಚಾಯತ್ ವ್ಯಾಪ್ತಿಗೆ ಒಳಪಡುವ ಕೆಲವು ಗ್ರಾಮಗಳಲ್ಲಿ ಕೈಗೊಂಡ ಕಾಮಗಾರಿಗಳ ಅಳತೆಗಳನ್ನು ಕಾಮಗಾರಿಗಳನ್ನು ಮಾಡಿದಕ್ಕಿಂತ ಹೆಚ್ಚುವರಿಯಾಗಿ ಅಳತೆ ಪುಸ್ತಕದಲ್ಲಿ ನಮೂದಿಸಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಈ ಆರೋಪಕ್ಕಾಗಿ ಇವರನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ರಾಯಚೂರು ಇವರು, ಸಂಖ್ಯೆ.ಜಿಪರಾ/ಸಿಸಿಎ/18/2004-05, ದಿ. 28-3-2005 ರ ಆದೇಶದಲ್ಲಿ ಅಮಾನತ್ತುಗೊಳಿಸಿದ್ದರು. ಈ ಪ್ರಕರಣದಲ್ಲಿ ಹೆಚ್ಚಿನ ತನಿಖೆಯನ್ನು ಕೈಗೊಳ್ಳುವ ಸಲುವಾಗಿ ಹಾಗೂ ಇವರನ್ನು ಸೇವೆಯಲ್ಲಿ ಮುಂದುವರೆಸಿದ್ದಲ್ಲಿ ಇನ್ನಷ್ಟು ಹಣಕಾಸಿನ ದುರುಪಯೋಗವನ್ನು ಮಾಡಿಕೊಳ್ಳುವ ಸಾಧ್ಯತೆಯನ್ನು ಮನಗಂಡು, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ರಾಯಚೂರು ಇವರು ಮೇಲೆ ಓದಲಾದ ಪತ್ರದಲ್ಲಿ ಶ್ರೀ ಗೋಪಾಲ ಕೃಷ್ಣ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ದೇವದುರ್ಗ ಇವರ ಅಮಾನತ್ತಿನ ಅವಧಿಯನ್ನು ದಿ.28.9.2005 ರಿಂದ ಮುಂದಿನ 6 ತಿಂಗಳ ಅವಧಿಗೆ ವಿಸ್ತರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ ಗ್ರಾಅಪ 13 ಜಿಪಅ 06, ಬೆಂಗಳೂರು, ದಿನಾಂಕ: 14ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಶ್ರೀ ಗೋಪಾಲ ಕೃಷ್ಣ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ದೇವದುರ್ಗ ಇವರ ಅಮಾನತ್ತಿನ ಅವಧಿಯನ್ನು ಸರ್ಕಾರವು ಕರ್ನಾಟಕ ಸರಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 10 (6) ರನ್ವಯ ದಿ.28-9-2005 ರಿಂದ ಮುಂದಿನ 6 ತಿಂಗಳವರೆಗೆ ವಿಸ್ತರಿಸಿ ಆದೇಶಿಸಿದೆ.

ವಿಸ್ತರಿಸಿದ ಅಮಾನತ್ತಿನ ಅವಧಿಯಲ್ಲಿ ಶ್ರೀ ಗೋಪಾಲ ಕೃಷ್ಣ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ದೇವದುರ್ಗ ಇವರು ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಗೋಪಾಲ ಕೃಷ್ಣ, ಇವರು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ.ಸುಂದರ,**

ಪಿ.ಆರ್. 303

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಕನ್ನಡ ಅಭಿವೃದ್ಧಿ ಪ್ರಾಧಿಕಾರ ಯೋಜನೇತರ ಶೀರ್ಷಿಕೆಯಲ್ಲಿ ಅನುದಾನ ಬಿಡುಗಡೆಗೊಳಿಸಲು ಕೋರಿ.

**ಓದಲಾಗಿದೆ:** 1 ಸರ್ಕಾರದ ಇದೇ ಸಂಖ್ಯೆ: ಆದೇಶ ದಿನಾಂಕ: 28.6.2005 ಮತ್ತು 28.12.2005

2 ಕನ್ನಡ ಅಭಿವೃದ್ಧಿ ಪ್ರಾಧಿಕಾರ ಕಾರ್ಯದರ್ಶಿಯವರ ಪತ್ರ ಸಂಖ್ಯೆ:ಕಅಪ್ರಾ:ಕಾ:ಲೆಕ್ಕ 2/2004–05, ದಿನಾಂಕ:4.2.2006.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (2)ರ ಪತ್ರದಲ್ಲಿ ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಇವರ 2005–06ನೇ ಸಾಲಿನ ಆಯವ್ಯಯದಲ್ಲಿ ಕಲ್ಪಿಸಲಾದ ಹಣದಲ್ಲಿ, ಯೋಜನೇತರ ಶೀರ್ಷಿಕೆ:2052–00–092–0–09 ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳು/ಸಿಬ್ಬಂದಿ ವರ್ಗದವರಿಗೆ ಹಾಗೂ ಮಾನ್ಯ ಅಧ್ಯಕ್ಷರು ಹಾಗೂ ಅವರ ಆಪ್ತ ಶಾಖೆಯ ಸಿಬ್ಬಂದಿ ವರ್ಗದವರಿಗೆ ಹಾಗೂ ಪ್ರಾಧಿಕಾರದ ಆಡಳಿತ ವೆಚ್ಚಕ್ಕಾಗಿ, ವೆಚ್ಚ ಮಾಡಲು ತ್ರೈಮಾಸಿಕ ಅವಧಿಯ ಉಳಿದ ಒಟ್ಟು ಹಣ ರೂ. 14.26 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಉಲ್ಲೇಖ (1)ರ ದಿನಾಂಕ:28.6.2002ರ ಆದೇಶದಲ್ಲಿ ಈ ಪ್ರಕರಣದಲ್ಲಿ ಈಗಾಗಲೇ ಪ್ರಥಮ ಕಂತಿನ ಹಣ ರೂ.14,24,000–00 (ಹದಿನಾಲ್ಕು ಲಕ್ಷದ ಇಪ್ಪತ್ತು ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಹಾಗೂ ದಿನಾಂಕ:28.12.2005ರ ಆದೇಶದಲ್ಲಿ ಎರಡನೇ ಕಂತಿನ ಹಣ ರೂ. 14,24,000/–(ಹದಿನಾಲ್ಕು ಲಕ್ಷದ ಇಪ್ಪತ್ತು ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಕಾರ್ಯದರ್ಶಿಗಳು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಗೆ ಈಗಾಗಲೇ ಬಿಡುಗಡೆ ಮಾಡಲಾಗಿದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 34 ಕೆಓಎಲ್ 2005, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2006**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ 2005–06ನೇ ಸಾಲಿಗೆ ಕನ್ನಡ ಅಭಿವೃದ್ಧಿ ಪ್ರಾಧಿಕಾರ ಬೆಂಗಳೂರು, ಇವರಿಗೆ ಶೀರ್ಷಿಕೆ 2052–00–092–0–09 (ಯೋಜನೇತರ) ಅಡಿಯಲ್ಲಿ ರೂ.42,74,000–00 ಗಳ ಅನುದಾನವನ್ನು ಆಯವ್ಯಯದಲ್ಲಿ ಒದಗಿಸಿದ್ದು, ಪ್ರಾಧಿಕಾರದ ಅಧ್ಯಕ್ಷರು ಮತ್ತು ಅವರ ಆಪ್ತ ಶಾಖೆಯ ಸಿಬ್ಬಂದಿ ವರ್ಗ ಕಾರ್ಯದರ್ಶಿ ಹಾಗೂ ಸಿಬ್ಬಂದಿ ವರ್ಗ ಮತ್ತು ಆಡಳಿತ ವೆಚ್ಚಕ್ಕಾಗಿ ವೆಚ್ಚ ಮಾಡಲು, ತೃತೀಯ ಹಾಗೂ ಅಂತಿಮ ಕಂತಿನ ಹಣ ರೂ.14,26,000–00 (ಹದಿನಾಲ್ಕು ಲಕ್ಷದ ಇಪ್ಪತ್ತಾರು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಕಾರ್ಯದರ್ಶಿಗಳು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2052–00–092–0–09 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಇವರ ಟಿಪ್ಪಣಿ ಸಂಖ್ಯೆ: ಶಿಇ 171 ಐಎಫ್ (ಬಿಎ) 2006 ದಿನಾಂಕ: 7.3.2006 ರಲ್ಲಿನ ಸಹಮತಿ ಮೇರೆಗೆ ಹಾಗೂ ಸರ್ಕಾರದ ಆದೇಶ ಸಂ. ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.96ರಲ್ಲಿ, ಇಲಾಖಾ ಕಾರ್ಯದರ್ಶಿಗಳಿಗೆ, ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಸಾಂಬಶಿವಂ**

ಪಿ.ಆರ್. 375

ಪೀಠಾಧಿಕಾರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ)

**ವಿಷಯ:** ದಿವಂಗತ: ಕೆ.ವಿ. ಶಂಕರೇಗೌಡರ ಪ್ರತಿಮೆಯನ್ನು ಮಂಡ್ಯ ನಗರದಲ್ಲಿ ನಿರ್ಮಿಸುವ ಬಗ್ಗೆ.

**ಓದಲಾಗಿದೆ:** ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕರ ಪತ್ರ ಸಂಖ್ಯೆ:ಕಸನಿ 13/ಪ್ರತಿಮೆ/2005.06 ದಿನಾಂಕ: 31.12.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ದಿವಂಗತ ಕೆ.ವಿ.ಶಂಕರೇಗೌಡರ ಸಾಂಸ್ಕೃತಿಕ ಪ್ರತಿಷ್ಠಾನ ಮಂಡ್ಯ ಇವರ ಮನವಿಯ ಮೇರೆಗೆ ದಿನಾಂಕ: 15–11–2005 ರಂದು ಮಂಡ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಭೆ ನಡೆಸಿ ಸದರಿ ಯೋಜನೆಯ ಒಟ್ಟು ಅಂದಾಜು ವೆಚ್ಚ ರೂ.18–00 ಲಕ್ಷಗಳ ಪೈಕಿ ರೂ. 10.63 ಲಕ್ಷ ಸಂಗ್ರಹವಾಗಿರುವುದಾಗಿಯೂ, ರೂ. 2.36 ಲಕ್ಷಗಳನ್ನು

ವಂತಿಕೆ ರೂಪದಲ್ಲಿ ಸಂಗ್ರಹಿಸಿಕೊಂಡು, ಉಳಿಕೆ ರೂ. 5.00 ಲಕ್ಷಗಳನ್ನು ಸರ್ಕಾರದಿಂದ ಅನುದಾನದ ರೂಪದಲ್ಲಿ ಪಡೆಯಲು ಸರ್ಕಾರವನ್ನು ಕೋರಬೇಕೆಂದು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಸದರಿ ಹಣವನ್ನು ಮಂಡ್ಯ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಿ ಆದೇಶ ಹೊರಡಿಸುವಂತೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕರು ಕೋರಿರುತ್ತಾರೆ. ಅಲ್ಲದೆ ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 4202–04–800–1–02–139 (ಯೋಜನೇತರ) ಪ್ರತಿಮೆ, ಸ್ಮಾರಕ ಹಾಗೂ ವೀರಸೌಧ ಶೀರ್ಷಿಕೆಯಡಿಯಲ್ಲಿ ಭರಿಸಬಹುದೆಂದು ನಿರ್ದೇಶಕರು ತಮ್ಮ ಪತ್ರದಲ್ಲಿ ತಿಳಿಸಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂ: ಸಂಕಇ 22 ಸ್ಮಾಪ್ರನಿ 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2006.**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಮಂಡ್ಯ ನಗರದಲ್ಲಿ ದಿವಂಗತ ಕೆ.ವಿ.ಶಂಕರೇಗೌಡ ರವರ ಪ್ರತಿಮೆಯನ್ನು ಸ್ಥಾಪಿಸುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ರೂ.5.00 (ರೂ. ಐದು ಲಕ್ಷ ಮಾತ್ರ) ಗಳನ್ನು ಮಂಡ್ಯ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಆದೇಶಿಸಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 4202–04–800–1–02–139 (ಯೋಜನೇತರ) ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರೀಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ:ಇಡಿ 211 ಐಎಫ್(ಬಿಎ) 2006 ದಿನಾಂಕ: 13.03.2006 ರಲ್ಲಿ ನೀಡಿದ ಸಹಮತಿ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–07–96 ರಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಸಾಂಬಶಿವಂ**

ಪಿ.ಆರ್. 376 ಪೀಠಾಧಿಕಾರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಬಾಗೇಪಲ್ಲಿ ವೀರಪ್ಪ, ನಿವೃತ್ತ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಇವರಿಗೆ ವಿಳಂಬವಾಗಿ ಪಾವತಿಯಾದ ನಿವೃತ್ತಿ ಸೌಲಭ್ಯಗಳ ಮೇಲೆ ಬಡ್ಡಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಸಮಸಂಖ್ಯೆಯ ಪತ್ರ ದಿನಾಂಕ: 18.8.2004.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 128 ಎಸ್‌ಇಎನ್ 2001, ದಿನಾಂಕ: 18.3.2005.
3. ಸರ್ಕಾರಿ ಅಧಿಸೂಚನೆ/ಪತ್ರ ಸಂಖ್ಯೆ: ಸಿಆಸುಇ 81 ಆಸೇನಿ 02, ದಿನಾಂಕ: 16.4.2005.
4. ಶ್ರೀ ಬಾಗೇಪಲ್ಲಿ ವೀರಪ್ಪ ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರ ಮನವಿ ಪತ್ರ ದಿನಾಂಕ: 29.4.2005.
5. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ(ನಿ)199 ಪಿಇಎನ್ 93, ದಿನಾಂಕ:13.9.1994.
6. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಪಿಇಎನ್ 03 ದಿನಾಂಕ: 21.8.2003.

**ಪ್ರಸ್ತಾವನೆ:**

ಶ್ರೀ ಬಾಗೇಪಲ್ಲಿ ವೀರಪ್ಪ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಇವರು ದಿನಾಂಕ: 31.1.2003 ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿರುತ್ತಾರೆ. ನಿವೃತ್ತಿ ಸಮಯದಲ್ಲಿ ಈ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ಬಾಕಿಯಿದ್ದುದರಿಂದ, ಅವರ ಎಲ್ಲಾ ನಿವೃತ್ತಿ ಸೌಲಭ್ಯಗಳನ್ನು ತಡೆಹಿಡಿದು ಕೇವಲ ತಾತ್ಕಾಲಿಕ ವಿಶ್ರಾಂತಿ ವೇತನವನ್ನು ಮಾತ್ರ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ಮಹಾಲೇಖಪಾಲರಿಗೆ ನಿರ್ದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 18.3.2005ರ ಸರ್ಕಾರಿ ಆದೇಶದಲ್ಲಿ ಸದರಿ ಅಧಿಕಾರಿಯವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಅವರ ಮೇಲೆ ಮಾಡಲಾಗಿದ್ದ ಆಪಾದನೆಗಳಿಂದ ದೋಷಮುಕ್ತರನ್ನಾಗಿಸಲಾಗಿದೆ.

ಮೇಲೆ ಕ್ರಮಸಂಖ್ಯೆ: (3)ರಲ್ಲಿ ಓದಲಾದ ದಿನಾಂಕ: 16.4.2005ರ ಸರ್ಕಾರಿ ಪತ್ರ ಮತ್ತು ಅಧಿಸೂಚನೆಗಳಲ್ಲಿ ನಿವೃತ್ತ ಅಧಿಕಾರಿಗೆ ತಡೆಹಿಡಿಯಲಾಗಿದ್ದ ನಿವೃತ್ತಿ ವೇತನ/ಉಪದಾನ ಹಾಗೂ ಗಳಿಕೆ ರಜೆ ನಗದೀಕರಣ ಮೊತ್ತಗಳನ್ನು ಬಿಡುಗಡೆಗೊಳಿಸಲಾಗಿದೆ. ಈ ಹಿನ್ನೆಲೆಯಲ್ಲಿ ತಮಗೆ ವಿಳಂಬವಾಗಿ ಪಾವತಿಯಾದ ನಿವೃತ್ತಿ ಸೌಲಭ್ಯಗಳ ಮೇಲೆ ಬಡ್ಡಿ ನೀಡುವಂತೆ ಮೇಲೆ ಕ್ರಮಸಂಖ್ಯೆ (4)ರಲ್ಲಿ ಓದಲಾದ ಮನವಿ ಪತ್ರದಲ್ಲಿ ನಿವೃತ್ತ ಅಧಿಕಾರಿಯು ಕೋರಿದ್ದಾರೆ.

ಅದರಂತೆ, ನಿವೃತ್ತ ಅಧಿಕಾರಿಯ ಮನವಿಯನ್ನು ಪರಿಗಣಿಸಿ, ವಿಳಂಬವಾಗಿ ಪಾವತಿಸಲಾದ ನಿವೃತ್ತಿ ಉಪದಾನ ಹಾಗೂ ಗಳಿಕೆ ರಜೆ ನಗದೀಕರಣ ಮೊತ್ತಗಳಿಗೆ ಮೇಲೆ ಕ್ರಮ ಸಂಖ್ಯೆ (5) ಮತ್ತು (6)ರಲ್ಲಿ ಓದಲಾದ ಸರ್ಕಾರಿ ಆದೇಶಗಳನ್ವಯ ಬಡ್ಡಿಯನ್ನು ಮಂಜೂರು ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 31 ಆಸೇನಿ 2003, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಬಾಗೇಪಲ್ಲಿ ವೀರಪ್ಪ ನಿವೃತ್ತ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಇವರಿಗೆ ವಿಳಂಬವಾಗಿ ಪಾವತಿಯಾದ ನಿವೃತ್ತಿ ಉಪದಾನ ಹಾಗೂ ಗಳಿಕೆ ರಜೆ ನಗದೀಕರಣ ಮೊತ್ತಗಳ ಮೇಲೆ ಈ ಕೆಳಕಂಡಂತೆ ಒಟ್ಟು ಮೊತ್ತ ರೂ. 43,271-00 (ನಲವತ್ತು ಮೂರು ಸಾವಿರದ ಎರಡು ನೂರ ಎಪ್ಪತ್ತೊಂದು ರೂಪಾಯಿಗಳು ಮಾತ್ರ)ಗಳ ಬಡ್ಡಿಯನ್ನು ಪಾವತಿಸಲು ಮಂಜೂರಾತಿ ನೀಡಿದೆ.

(ಅ) ಉಪದಾನ: (D.C.R.G.) ರೂ. 1,48,680-00

| | | |
|---|---|---|
| ದಿನಾಂಕ:1.7.2003 ರಿಂದ 20.8.2003 ವರೆಗೆ ಶೇ. 12 ರಂತೆ | ರೂ. | 2,464.42 |
| (ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ(ನಿ)199 ಪಿಇಎನ್ 93 ದಿನಾಂಕ:13.9.94ರನ್ವಯ) | | |
| ದಿನಾಂಕ:21.8.2003 ರಿಂದ 30.6.2005 ವರೆಗೆ ಶೇ. 8 ರಂತೆ | ರೂ. | 22,165-00 |
| (ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ(ಎ)1 ಪಿಇಎನ್ 2003, ದಿನಾಂಕ:21.8.2003ರನ್ವಯ) | | |
| **ಒಟ್ಟು** | **ರೂ.** | **24,629-00** |

(ಆ) ನಿವೃತ್ತಿ ನಂತರದ ಗಳಿಕೆ ರಜೆ ನಗದೀಕರಣ ರೂ. 1,22,360-00

| | | |
|---|---|---|
| ದಿನಾಂಕ:1.7.2003 ರಿಂದ 20.8.2003 ವರೆಗೆ ಶೇ. 12 ರಂತೆ | ರೂ. | 2,028-15 |
| (ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ(ನಿ)199 ಪಿಇಎನ್ 93 ದಿನಾಂಕ:13.9.94ರನ್ವಯ) | | |
| ದಿನಾಂಕ:21.8.2003 ರಿಂದ 31.10.2005 ವರೆಗೆ ಶೇ. 8 ರಂತೆ (26 ತಿಂಗಳು 11 ದಿನಗಳು) | ರೂ. | 16,613-76 |
| **ಒಟ್ಟು** | **ರೂ.** | **18,642-00** |
| | **(ಅ)** | **ರೂ. 24,629-00** |
| | **(ಆ)** | **ರೂ. 18,642-00** |
| **ಪಾವತಿಸಬೇಕಾದ ಒಟ್ಟು ಮೊತ್ತ** | | **ರೂ. 43,271-00** |

ದಿನಾಂಕ:20.2.2006ರ ಈ ಆದೇಶವನ್ನು (ಸಂಖ್ಯೆ:31 ಆಸೇನಿ 2003) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ(ವಿ) 147/06(ಎ) ದಿನಾಂಕ:31.1.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 432

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಶ್ರೀ ಎಫ್.ಆರ್.ಸಂಬರಗಿ, ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಬಿ.ಎನ್. ಶಿವಶಂಕರ್, ಹಿರಿಯ ಸಹಾಯಕ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣೆ ಮುಂದುವರಿಸಿ ಅಂತಿಮಗೊಳಿಸುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 18 ಎಸ್ಇಎನ್ 05 ದಿ:03.11.2005.

2 ಶ್ರೀ ಟಿ.ಎಸ್.ಪಾಲನೇತ್ರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ದಿ:02.02.2006ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀ ಎಫ್.ಆರ್.ಸಂಬರಗಿ, ಅಧೀನ ಕಾರ್ಯದರ್ಶಿ ಮತ್ತು ಶ್ರೀ ಬಿ.ಎನ್.ಶಿವಶಂಕರ್, ಹಿರಿಯ ಸಹಾಯಕರು ಶಿಕ್ಷಣ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಖೊಟ್ಟಿ ಆದೇಶ ಸೃಷ್ಟಿಸಿ ಶ್ರೀ ಜೆ.ರಾಜು ಎಂಬ ಮುಖ್ಯ ಶಿಕ್ಷಕರನ್ನು ವರ್ಗಾವಣೆ ಮಾಡಲು ಪ್ರಯತ್ನಿಸಿ ಅಧಿಕಾರ ದುರುಪಯೋಗ ಪಡಿಸಿಕೊಂಡಿದ್ದಾರೆಂಬ ಆರೋಪಕ್ಕೆ ಸಂಬಂಧಿಸಿದಂತೆ ಇವರುಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿ:03.11.05ರ ಆದೇಶದಲ್ಲಿ ವಿಚಾರಣೆ ನಡೆಸಲು ಶ್ರೀ ಟಿ.ಎಸ್.ಪಾಲನೇತ್ರ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈ ಪ್ರಕರಣದ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ. ಸದರಿ ವಿಚಾರಣಾ ವರದಿಯಲ್ಲಿ ಒಂದನೇ ಸಾಕ್ಷಿ ಶ್ರೀ ಯರಗಪ್ಪರವರು ನೀಡಿದ ಹೇಳಿಕೆಯಲ್ಲಿ ಸರ್ಕಾರದಿಂದ ಹೊರಡಿಸಿರುವ ಆದೇಶಗಳಲ್ಲಿ ಆದೇಶದ ಕೊನೆಯಲ್ಲಿ ಪ್ರತಿಗಳನ್ನು ಗೌರವ ಪೂರ್ವಕವಾಗಿ ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ ಎಂಬ ಶಬ್ಧಗಳನ್ನು ಸಾಮಾನ್ಯವಾಗಿ ಉಪಯೋಗಿಸುವುದಿಲ್ಲವೆಂಬ ಹೇಳಿಕೆಯನ್ನು ಹಾಗೂ ಪ್ರಮುಖ ಸಾಕ್ಷಿ ಶ್ರೀ ಎಸ್.ಕೆ.ರಮೇಶ್ ಎಂಬುವವರು ಎರಡು ಬಾರಿ ನೋಟೀಸ್ ನೀಡಿದ್ದರೂ ವಿಚಾರಣೆಗೆ ಹಾಜರಾಗಲಿಲ್ಲವೆಂಬ ಕಾರಣವನ್ನು ಗಣನೆಗೆ ತೆಗೆದುಕೊಂಡು ನಿರ್ಣಯಕ್ಕೆ ಬಂದಿರುತ್ತಾರೆ.

ಶ್ರೀ ಎಸ್.ಕೆ.ರಮೇಶ್ ಅವರ ವಿಳಾಸ ದೋಷಾರೋಪಣಾ ಪಟ್ಟಿಯ ಅನುಬಂಧ-3ರಲ್ಲಿ ಮನೆ ನಂ.32, ಆಂಜನೇಯ ಬ್ಲಾಕ್, ಕೆ.ಆರ್.ನಗರ, ಮೈಸೂರು ಎಂಬುದಾಗಿಯೂ ಅನುಬಂಧ-4ರಲ್ಲಿ ಶ್ರೀ ಎಸ್.ಕೆ.ರಮೇಶ್ ತಂದೆ ಶ್ರೀ ಎಸ್.ಎಂ. ಕೆಂಪೇಗೌಡ, ಆಂಜನೇಯ ಬಡಾವಣೆ, ನಂ.30, ಕೆ.ಆರ್.ನಗರ, ಮೈಸೂರು ಎಂಬುದಾಗಿಯೂ ಇರುತ್ತದೆ. ಆದ್ದರಿಂದ ಸಾಕ್ಷಿದಾರರಿಗೆ ನೋಟೀಸು ತಲುಪದೇ ಇರುವ ಸಾಧ್ಯತೆ ಇರುತ್ತದೆ. ಒಂದು ವೇಳೆ ತಲುಪಿದ್ದರೂ ಸಾಕ್ಷಿ ವಿಚಾರಣೆಗೆ ಹಾಜರಾಗದಿದ್ದಲ್ಲಿ ಕರ್ನಾಟಕ ಇಲಾಖಾ ವಿಚಾರಣೆ (ಸಾಕ್ಷಿಗಳ ಹಾಜರಾತಿ ಹಾಗೂ ದಾಖಲೆಗಳ ಹಾಜರು ಪಡಿಸುವಿಕೆ ಜಾರಿ) ಕಾಯ್ದೆ ಮತ್ತು ನಿಯಮಗಳು 1981ರಡಿ ಕ್ರಮ ಜರುಗಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ವಿಚಾರಣಾ ವರದಿಯಲ್ಲಿ ನ್ಯೂನತೆ ಇರುವುದನ್ನು ಗಮನಿಸಿದ ಸರ್ಕಾರವು ಮೇಲ್ಕಂಡ

ಹಂತದಿಂದ ವಿಚಾರಣೆಯು vitiate ಆಗಿದೆಯೆಂದು ಪರಿಗಣಿಸಿ ಶ್ರೀ ಎಸ್.ಕೆ. ರಮೇಶ್, ಸಾಕ್ಷಿದಾರರ ಸರಿಯಾದ ವಿಳಾಸಕ್ಕೆ ಸಮನ್ಸ್ ಜಾರಿಮಾಡಿ ಅವರ ಹೇಳಿಕೆ ಪಡೆಯಲು, ವಿಚಾರಣೆ ಮುಂದುವರಿಸಲು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಎಸ್ಇಎನ್ 05 ಬೆಂಗಳೂರು ದಿನಾಂಕ:14ನೇ ಮಾರ್ಚ್ 2006**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11-ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲೆ (2)ರಲ್ಲಿ ಓದಲಾದ ವಿಚಾರಣಾ ವರದಿಯನ್ನು ವಿಚಾರಣಾಧಿಕಾರಿಯವರಿಗೆ ಹಿಂದಿರುಗಿಸಿ ಪ್ರಸ್ತುತ ಪ್ರಕರಣದ ಮುಖ್ಯ ಸಾಕ್ಷಿದಾರರಾದ ಶ್ರೀ ಎಸ್.ಕೆ. ರಮೇಶ್‌ರವರ ಸರಿಯಾದ ವಿಳಾಸಕ್ಕೆ ಕರ್ನಾಟಕ ಇಲಾಖಾ ವಿಚಾರಣೆ (ಸಾಕ್ಷಿಗಳ ಹಾಜರಾತಿ ಹಾಗೂ ದಾಖಲೆಗಳ ಹಾಜರುಪಡಿಸುವಿಕೆ ಜಾರಿ) ಕಾಯ್ದೆ ಮತ್ತು ನಿಯಮಗಳು 1981ರಡಿ ಸಾಕ್ಷಿಸಮನ್ಸ್ ಜಾರಿ ಮಾಡಿ, ಅವರ ಹೇಳಿಕೆ ಪಡೆಯುವ ಹಂತದಿಂದ ವಿಚಾರಣೆಯನ್ನು ಮುಂದುವರೆಸಿ ಅಂತಿಮ ವಿಚಾರಣಾ ವರದಿಯನ್ನು ತ್ವರಿತವಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 436

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಅಬ್ದುಲ್ ರಹೀಂ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿ ಆದೇಶ ಮಾಡುವ ಬಗ್ಗೆ.

**ಓದಲಾಗಿದೆ:** ಉಪ ಲೋಕಾಯುಕ್ತರ ಪತ್ರ ಸಂ:ಕಂಪ್ಲೆಂಟ್/ಉಪಲೋಕ್/ಬಿಸಿಡಿ-100/2004/ ದಿ:4.1.06ರಲ್ಲಿ ಕೊನೆಗೊಂಡ ಪತ್ರ ವ್ಯವಹಾರ.

**ಪ್ರಸ್ತಾವನೆ:**

ಶ್ರೀ ಅಬ್ದುಲ್ ರಹೀಂ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು ವಿಶೇಷ ಭೂಸ್ವಾಧೀನಾಧಿಕಾರಿ ಹಾಗೂ ಸಕ್ಷಮ ಪ್ರಾಧಿಕಾರಿಗಳವರ ಕಛೇರಿ, ನೆಲಮಂಗಲ-ತುಮಕೂರು ರಸ್ತೆ, ರಾಷ್ಟ್ರೀಯ ಹೆದ್ದಾರಿ-4, ಬೆಂಗಳೂರು ಇಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ತುಮಕೂರು ತಾಲ್ಲೂಕು ಹಿರೇಹಳ್ಳಿ ಗ್ರಾಮದ ಸ.ನಂ.42/2ರಲ್ಲಿ 13 ಗುಂಟೆ ಜಮೀನನ್ನು ರಾಷ್ಟ್ರೀಯ ಹೆದ್ದಾರಿ-4ರ ವಿಸ್ತರಣೆಗಾಗಿ ಭೂಸ್ವಾಧೀನ ಮಾಡಿಕೊಂಡು ಭೂಪರಿಹಾರ ಧನ ವಿತರಣೆಯನ್ನು ಶ್ರೀ ಸಿ.ವಿ.ಹೊಸಳಯ್ಯ ಇವರಿಗೆ ಪಾವತಿ ಮಾಡದೆ ಇದೇ ಹೆಸರಿನ ಬೇರೆ ವ್ಯಕ್ತಿಗೆ ಪರಿಹಾರಧನ ಪಾವತಿ ಮಾಡುವುದರ ಮೂಲಕ ಅಧಿಕಾರ ದುರುಪಯೋಗ ಪಡಿಸಿಕೊಂಡಿದ್ದಾರೆಂದು ಶ್ರೀ ಸಿ.ವಿ.ಹೊಸಳಯ್ಯ ಮತ್ತು ಶ್ರೀ ಶಿವಣ್ಣ ಬಿನ್ ವೀರಣ್ಣ ಹಿರೇಹಳ್ಳಿ, ತುಮಕೂರು ತಾಲ್ಲೂಕು ಅವರುಗಳು ಸಲ್ಲಿಸಿದ ದೂರಿನ ಮೇರೆಗೆ ತನಿಖೆಯನ್ನು ನಡೆಸಿದ ಸನ್ಮಾನ್ಯ ಉಪ ಲೋಕಾಯುಕ್ತರವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಉಲ್ಲೇಖಿಸಿದ ಲೋಕಾಯುಕ್ತ ಕಾಯ್ದೆ ಕಲಂ 12(3)ರಡಿಯ ತಮ್ಮ ವರದಿಯಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಮಾಡಿರುವ ಆರೋಪವು ಮೇಲು ನೋಟಕ್ಕೆ ಸತ್ಯವೆಂದು ಕಂಡು ಬಂದಿರುತ್ತದೆಯೆಂದು ತಿಳಿಸಿ, ಅವರ ವಿರುದ್ಧ ಪೂರ್ಣ ಪ್ರಮಾಣದ ತನಿಖೆಗಾಗಿ ಸಿ.ಸಿ.ಎ. ನಿಯಮ 14-ಎ ರಡಿ ತಮಗೆ ವಹಿಸುವಂತೆ ಶಿಫಾರಸ್ಸು ಮಾಡಿದ್ದಾರೆ. ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಅದನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 139 ಎಸ್ಇಎನ್ 05 ಬೆಂಗಳೂರು ದಿನಾಂಕ: 14ನೇ ಮಾರ್ಚ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಅಬ್ದುಲ್ ರಹೀಂ, ಕೆಎಎಸ್ ಅಧಿಕಾರಿ ಅವರ ವಿರುದ್ಧ ಮೇಲೆ ಹೇಳಿದ ಆರೋಪದ ಕುರಿತು ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರ ಮೂಲಕ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 437

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).